ಓಂ

ಶ್ರೀಮಜ್ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು.

# ಶ್ರೀಮಾಹೇಶ್ವರದೀಕ್ಷಾವಿಧಿಃ

( ವೇದಾನುಶಾಸನಶಾಸಿತಃ )



ಶ್ರೀಮದ್ವೀರಶೈವ ಧರ್ಮಶಾಸ್ತ್ರ ಪಾರಾವಾರ ಪಾರಂಗ
ತೇನ ಪಂಡಿತ ಮಂಡಲಿ ಮಂಡನಾಯ
ಮಾನೇನ ನಾಗನೂರು ಬೃಹನ್ಮಠಾ
ಧ್ಯಕ್ಷೇಣ ಶ್ರೀ ಕಾಶೀನಾಥ ಶಾ
ಸ್ತ್ರಿಣಾ ಕಾವ್ಯತೀರ್ಥೇನ
ವಿರಚಿತಃ



ಎಚ್. ಎಸ್. ಶಿವಲಿಂಗಶಾಸ್ತ್ರಿಣಾ

ಧಾರವಾಡನಗರೇ ಧರ್ಮತರಂಗಿಣೀ ಮುದ್ರಣಾಲಯೇ

ಮುದ್ರಿತಃ

೧೯೨೫

ಬೆಲೆ ೧೨ ಆಣೆ.

ಶ್ರೀ ಜಗದ್ಗುರು ಪಂಚಾಚಾರ್ಯೇಭ್ಯೋನಮಃ—

# " ಪ್ರಸ್ತಾವನೆಯು "



ಶ್ರೀ ಪರಮಾತ್ಮನಿಂದ ನಿರ್ಮಿತವಾದ ಈ ಜಗತ್ತಿನಲ್ಲಿರತಕ್ಕ ಸಮಸ್ತಮಾನವ ವರ್ಗದ ಉದ್ಧಾರಕ್ಕೋಸ್ಕರ ವೇದಾಗಮಗಳ ಉತ್ಪತ್ತಿಯಾಗಿರುವದು ಜಗತ್ಪ್ರಸಿದ್ಧವಷ್ಟೇ! ಭವಾಬ್ಧಿತರಣ ತರಣಿ ರೂಪಿಗಳಾದ ಇಂಥ ವೇದಾಗಮಗಳ ವಿಷಯದಲ್ಲಿ ಬುದ್ಧನಕಾಲದಿಂದೀಚೆಗೆ ಕೆಲವು ಜಡಮತಿಗಳು ಇವು ದೇವನಿರ್ಮಿತಗಳಾಗಿರದೆ ಪುರುಷನಿರ್ಮಿತಗಳಾಗಿರುವವೆಂದೂ, ದೇವರಿರುವದು ಸುಳ್ಳೆಂದೂ, ಈ ಜಗತ್ತಿನ ಉತ್ಪತ್ತಿಯು ದೇವರಿಂದಾಗಿರದೆ ತನ್ನಿಂದ ತಾನೇ ಆಗಿರುವದೆಂದೂ ಹೇಳಿಕೊಳ್ಳುತ್ತ " ನಾಸ್ತಿಕ " ರೆಂಬ ಹೆಸರಿನಿಂದ ಪ್ರಸಿದ್ಧರಾದರು. ಆದರೆ ಮತ್ತೆ ಕೆಲವರು ಪುರುಷಬುದ್ಧ್ಯಗಮ್ಯಗಳಾದ ಈ ವೇದಾಗಮಗಳು ಶಿವೋಕ್ತಗಳೆಂದೂ ಈ ಅಖಂಡ ಸೃಷ್ಟಿ ರೂಪಕಾರ್ಯವು ತನ್ನಿಂದ ತಾನೇ ಆಗಿರದೆ ಇದಕ್ಕೆ ಒಂದು ಕಾರಣವುಂಟೆಂದೂ ಇಂಥ ಕಾರಣ ವಸ್ತುವು ಸಚ್ಚಿದಾನಂದ ರೂಪಿಯಾದ ಶಿವನೆಂದೂ ಯಥಾರ್ಥವಾಗಿ ನುಡಿಯುತ್ತ " ಆಸ್ತಿಕ " ರೆಂಬ ಹೆಸರಿನಿಂದ ಅನಾದಿಕಾಲದಿಂದ ನಮ್ಮ ಭರತಖಂಡದಲ್ಲಿ ಪ್ರಸಿದ್ಧರಾಗಿರುತ್ತಾರೆ. ಇಂಥ ಆಸ್ತಿಕರಲ್ಲಿ ಭಿನ್ನಭಿನ್ನಾಭಿಪ್ರಾಯಗಳುಂಟಾಗಿ " ವೈದಿಕ" ಹಾಗೂ " ಅವೈದಿಕ " ಗಳೆಂಬ ಎರಡು ವರ್ಗಗಳಾಗಿರುತ್ತವೆ. ಇವೆರಡರೊಳಗೆ ಮುಖ್ಯವಾದ ವೈದಿಕ ವರ್ಗದಲ್ಲಿ ಗಣಿಸಲ್ಪಟ್ಟ ಕೆಲವು ಮತಗಳಲ್ಲಿ ಪರಮ ವೈದಿಕವಾದ ವೀರಶೈವ ಮತವು ಶಿಖಾರತ್ನದಂತೊಪ್ಪುತ್ತಿರುವದು ಧರ್ಮಶಾಸ್ತ್ರ ಪ್ರಸಿದ್ಧವಾಗಿದೆ. ಈ ವೀರಶೈವ ಮತದ ಧರ್ಮಶಾಸ್ತ್ರವು ಪಾಶ್ಚಾತ್ಯಾದಂತಿದ್ದಾಗ್ಯೂ ಮುಖ್ಯವಾಗಿ ಇದರ ಸ್ವರೂಪವು ಲಿಂಗಾಂಗ ಸಾಮರಸ್ಯ ಬೋಧಾತ್ಮಕವಾಗಿರುತ್ತದ. ಲಿಂಗವೇ ಶಿವನೆಂದೂ ಅಂಗವೇ ಜೀವನೆಂದೂ ಈ ಉಭಯರ ಏಕೀಕರಣವೇ ಸಾಮರಸ್ಯವೆಂದೂ ಇದರ ಮಥಿತಾರ್ಥ ವಿರುತ್ತದೆ. ಆದ್ದರಿಂದ ಗುರುಮೂರ್ತಿಯು, ಪರಬ್ರಹ್ಮ ರೂಪನಾದ ಲಿಂಗ ಮೂರ್ತಿಯ ಸಂಬಂಧವು ಶರೀರಕ್ಕೆ ಸದಾ ಇರಬೇಕೆಂದೂ ಕೀಟಭ್ರಮರ ಯೋಗದಂತೆ ಈ ಸಂಬಂಧದಿಂದ ಶರೀರವು ಶಿವಮಯವಾಗು

ವಹೆಂದೂ ಯೋಚಿಸಿ ಆನೆಯ ತಿಂಗಳಲ್ಲಿಯೇ ಗರ್ಭಕ್ಕೆ ಲಿಂಗಧಾರಣವನ್ನು ಮಾಡಿ ಆ ಲಿಂಗವನ್ನು ಶಯನಾವಸ್ಥೆಯಲ್ಲಿರಿಸುತ್ತಾನೆ. ಪುನಃ ವೇದಾಧ್ಯಯನಾಧಿಕಾರ ಪ್ರಾಪ್ತಿಗೋಸ್ಕರ ಆನೆಯ ವರ್ಷದಲ್ಲಿ ವಿಶೇಷ ಸಂಸ್ಕಾರಗಳಿಂದೊಡಗೂಡಿದ ದೀಕ್ಷಾ ಕರ್ಮ ( ಉಪನಯನ ) ವನ್ನು ಮಾಡಿ ಆ ಕಾಲದಲ್ಲಿ ಲಿಂಗಾಂಗ ಸಾಮರಸ್ಯವನ್ನು ಬೋಧಿಸುತ್ತಾನೆ. ಈ ದೀಕ್ಷೆಯೇ ಬ್ರಹ್ಮಚಾರಿ- ಗೃಹಸ್ಥ- ವಾನಪ್ರಸ್ಥ- ಸನ್ಯಾಸಿಗಳೆಂಬ ಚತುರಾಶ್ರಮಿಗಳಿಗೆ ಮುಕ್ತಿ ಪಟ್ಟಣವನ್ನು ಹೊಂದಿಸುವ ರಾಜಮಾರ್ಗವಾಗಿರುತ್ತದೆ. ಈ ದೀಕ್ಷೆಯ ಪ್ರಭಾವವನ್ನು ವೀರಶೈವ ಮತಸ್ಥಾಪಕರಾದ ಶ್ರೀ ಜಗದ್ಗುರು ರೇಣುಕ ಶಿವಾಚಾರ್ಯರು " ದೀಯತೇ ಪರಮಂ ಜ್ಞಾನಂ ಕ್ಷೀಯತೇಪಾಶಬಂಧ ನಂ| ಯಯಾ ದೀಕ್ಷೇತಿ ಸಾ ತಸ್ಯಾಂ ಗುರುರ್ದೀಕ್ಷಾಗುರುಃ ಸ್ಮೃತಃ" ಎಂದು ವರ್ಣಿ ಸಿದ್ದಾರೆ. ಅಂದಮೇಲೆ ಈ ದೀಕ್ಷೆಯ ಹಾಗೂ ದೀಕ್ಷಾಚಾರ್ಯನ ಸ್ವರೂಪವು ಜ್ಞಾನಿಗಳಿಗೆ ಗೊತ್ತಾಗುವದಲ್ಲದೆ ಅಜ್ಞಾನಿಗಳಿಗೆ ಎಂದೂ ಗೊತ್ತಾಗಲಾರದು. ಸಕಲಾಶ್ರಮಿಗಳಿಗೂ ಕೂಡ ಮುಕ್ತಿ ಸುಖವನ್ನು ಕೊಡತಕ್ಕ ಇಂಥ ಶಿವದೀಕ್ಷೆಯ ನ್ನು ಮಾಡುವ ಅಧಿಕಾರವು ಕೇವಲ ಗುರುಸ್ಥಲದ ಶ್ರೀ ಪಟ್ಟಚರಾಧಿಕಾರಿಗಳಿಗಿದು ವದೇ ಹೊರತು ಬೇರೊಬ್ಬರಿಗಿಲ್ಲವೆನ್ನುವದು ಧರ್ಮಶಾಸ್ತ್ರದಿಂದಲೂ ವೃದ್ಧ ಪರಂಪ ರೆಯಿಂದಲೂ ಲೋಕಪ್ರಸಿದ್ಧವೇ ಅದೆ. ಹೀಗಿರುವ ವಿಷಯದಲ್ಲಿ ಭ್ರಮಿತ ಮತಿಯಾ ದ ಯಾವದಾದರೊಂದು ಮಾನವ ಶ್ವಾನವು ಮನಸ್ಸಿಗೆ ಬಂದಂತೆ ಕೂಗಿದರೆ ಅದರಿಂ ದಾಗುವ ಕ್ಷತಿಯಾದರೂ ಏನು? ಅಸ್ತು! ಮುಕ್ತಿ ದಾಯಕವಾದ ಈ ದೀಕ್ಷೆಯನ್ನು ಮಾಡತಕ್ಕ ಗುರುಮೂರ್ತಿಗಳು ವೀರಶೈವ ಧರ್ಮಶಾಸ್ತ್ರದ ಸ್ವರೂಪವನ್ನು ಚನ್ನಾಗಿ ಅರಿತವರಾಗಿಯೂ ಯೋಗಸಾಧನದಲ್ಲಿ ನಿಷ್ಣಾತರಾಗಿಯೂ ಇರಬೇಕು. ಯಾಕಂದರೆ ಮಾಂಸ ಪಿಂಡಮಯವಾದ ಶಿಷ್ಯನ ದೇಹವನ್ನು ಮಂತ್ರ ಪಿಂಡಮಯವನ್ನಾಗಿ ಮಾಡಬೇಕಾದ ವಿಷಯದಲ್ಲಿ ಯೋಗ ಕ್ರಿಯೆಯೇ ಮುಖ್ಯಾಂಗವಾಗಿರುತ್ತದೆ. ಈ ರಹಸ್ಯವನ್ನರಿಯದೆ ಸುಮ್ಮನೆ ಒಟ ಒಟವೆನ್ನುತ್ತ ಮಸ್ತಕದ ಮೇಲೆ ನಾಲ್ಕು ಬಿಲ್ವದಲ ಗಳನ್ನು ಚಲ್ಲಿದರೆ ದೀಕ್ಷೆಯೆನಿಸಿಕೊಳ್ಳಲಾರದು. ಈ ತರದ ದೀಕ್ಷೆಯಿಂದ ದೀಕ್ಷಿತ ವಟುವಿಗೆ ಯಾವ ಪ್ರಯೋಜನವೂ ದೊರೆಯಲಾರದು. ಮಾಡುವದೇನು? ಕಲಿಕಾಲ ವೈಚಿತ್ರ್ಯದಿಂದ ಅದರಲ್ಲಿ ಬಸವನ ಕಾಲದಿಂದ ನಮ್ಮ ಧರ್ಮದಲ್ಲಿ ವೈದಿಕ ಕ್ರಿಯೆ

ಗಳೆಲ್ಲ ಲುಪ್ತಗಳಾಗಿ ಸಂಸ್ಕೃತ ಶಿಕ್ಷಣವು ಕ್ಷೀಣದಶೆಯನ್ನು ಹೊಂದಿ " ವೇದಗಳ ಹಲ್ಲು ಮುರಿಯುವೆ- ಆಗಮಗಳ ಮೂಗು ಕೊಯ್ಯುವೆ- ಹದಿನೆಂಟು ಜಾತಿಯ ಕೆರಹಿನಟ್ಟಿಗೆ ಸರಿಯೆಂಬೆ " ಇವೇ ಮೊದಲಾದ ಅಮಂಗಲವಾಕ್ಯಗಳಿಂದೊಡಗೂಡಿದ ವಚನಗಳ ಆರ್ಭಟದಿಂದ ಈ ಪವಿತ್ರ ಮತವು ಪರಮತಗಳಲ್ಲಿ ಹೇಳಲಾರದಷ್ಟು ಹೇಯವೆನಿಸಿಕೊಂಡಿದೆ. ಸಂಸ್ಕೃತ ಶಿಕ್ಷಣಕ್ಕೆ ಬರೆಯನ್ನು ಹಾಕಿ ಇಂಥ ವಚನ ಜಾಲದೊಳಗೆ ಸಿಲುಕಿ ನರಳುತ್ತಿರುವ ಗುರುಗಳ ಸಂಖ್ಯೆಯು ನಮ್ಮಲ್ಲಿ ಹೆಚ್ಚಿರುವದಲ್ಲದೆ ಧರ್ಮಶಾಸ್ತ್ರಜ್ಞರ ಸಂಖ್ಯೆಯು ಅತಿವಿರಳವಾಗಿರುವದು. ಇತ್ತೀಚೆಗೆ ಪೂರ್ವಾಚಾರ್ಯರ ಕೃಪೆಯಿಂದ ಅನೇಕ ಗುರುಸ್ಥಲ ಮಠಾಧಿಕಾರಿಗಳು ವೈದಿಕ ವಿದ್ಯಾವಿಶಾರದರಾಗುತ್ತ ನಡೆದಿರುವರು. ಆದಾಗ್ಯೂ ಇನ್ನೂ ಅಸಂಖ್ಯಾತ ಪಟ್ಟಚರಮೂರ್ತಿಗಳು ಸಂಸ್ಕೃತ ವಿದ್ಯೆಯನ್ನು ಕಲಿಯದೆ ಕೇವಲ ಕನ್ನಡ ವಿದ್ಯೆಯನ್ನು ಕಲಿತು ವೈದಿಕ ಕ್ರಿಯಾಚಾರಶೂನ್ಯರಾಗಿರುವರು. ಈ ಮಹನೀಯರು ಮಂಗಲವೇಷಾಲಂಕೃತರಾಗಿ ಶುದ್ಧ ಮಡಿಯಿಂದ ದೀಕ್ಷೆಯನ್ನು ಮಾಡುವದೊತ್ತಟ್ಟಿಗಿರಲಿ! ದೀಕ್ಷೆಯ ಕಾಲಕ್ಕೆ ಸ್ನಾನವನ್ನು ಮಾಡದೆ ಅಂಗಿಯನ್ನು ತೊಟ್ಟುಕೊಂಡು ತಲೆಗೆ ರೇಶಮಿಯ ಮಡಿಯನ್ನು ತಿದ್ದಿ ಸುತ್ತಿಕೊಂಡು ಒಂದು ಅತಿ ಪ್ರಾಚೀನವಾದ ಸೊಬರದ ಮೇಲೆ ಕಂಬಳಿಯನ್ನು ಹಾಸಿಕೊಂಡು ಬೀಗರ ಮನೆಗೆ ಹೋದ ಬೀಗರಂತೆ ಸುಖವಾಗಿ ಕುಳಿತುಕೊಂಡು ಅಂಗಲಿಂಗ ಸಂಸ್ಕಾರಗಳನ್ನು ಮಾಡದೆ ವ್ಯರ್ಥವಾಗಿ ಘಂಟಾನಾದವನ್ನು ಮಾಡಿಸುತ್ತಾ ದೀಕ್ಷಾ ಕರ್ಮಕ್ಕೆ ನಿಷೇಧವೆನಿಸಿಕೊಂಡ ರಾತ್ರಿ ಸಮಯದಲ್ಲಿಯೇ ಒಂದು ತಾಸಿನೊಳಗೆ ದೀಕ್ಷೆಯನ್ನು ಮಾಡಿಬಿಡುವರು. ದೀಕ್ಷಾ ಕಾಲದಲ್ಲಿ ಮಂತ್ರಪೂರ್ವಕವಾಗಿ ಶಿಖೆಯನ್ನು ಬಿಡಿಸಬೇಕೆಂದು ಧರ್ಮಶಾಸ್ತ್ರವು ಸಿಂಹನಾದವನ್ನು ಮಾಡುತ್ತಿದ್ದಾಗ್ಯೂ ಅದನ್ನು ಲಕ್ಷ್ಯಕ್ಕೆ ತರದೆ ಯಾವತ್ತು ತಲೆಯನ್ನು ಒಳ್ಳೇ ನುಣುಪಾಗಿ ಬೋಳಿಸಿ ಪತಿಹೀನ ಬೋಳಿಗಳಂತೆ ವಟುಗಳನ್ನು ಅಮಂಗಲರನ್ನಾಗಿ ಮಾಡಿ ಶೂದ್ರಪದ್ಧತಿಯನ್ನು ಹಬ್ಬಿಸುವರು. ಈ ಅಮಂಗಲ ಪದ್ಧತಿಯು ನಮ್ಮ ಧರ್ಮದಲ್ಲಿ ವಿಶೇಷವಾಗಿ ವಿರಕ್ತರಿಂದಂಟಿಕೊಂಡಿರುವದು. ಈ ತರದ ಧರ್ಮ ದ್ರೋಹಾತ್ಮಕ ಪದ್ಧತಿಗೆ ಧಿಕ್ಕಾರ! ಧಿಕ್ಕಾರ!! ಶಿವ! ಶಿವ! ಹೀಗಾಗೋಣದರಿಂದ ಈ ಪವಿತ್ರ ಧರ್ಮವು ಸುಧಾರಿಸುವ ಬಗೆ ಹೇಗೆ? . ಆದಕಾರಣ ಸಂಸ್ಕೃತ ಶಿಕ್ಷಣವನ್ನು ಹೊಂದದ ಈ ತರದ ಅನ್ಯಾಯ ಪದ್ಧತಿಗಳಿಂದೊಡಗೂಡಿದ ಪಟ್ಟಚರಮೂರ್ತಿಗಳು ಸುಧಾ

ವಹೆಂದೂ ಯೋಚಿಸಿ ಆನೆಯ ತಿಂಗಳಲ್ಲಿಯೇ ಗರ್ಭಕ್ಕೆ ಲಿಂಗಧಾರಣವನ್ನು ಮಾಡಿ ಆ ಲಿಂಗವನ್ನು ಶಯನಾವಸ್ಥೆಯಲ್ಲಿರಿಸುತ್ತಾನೆ. ಪುನಃ ವೇದಾಧ್ಯಯನಾಧಿಕಾರ ಪ್ರಾಪ್ತಿಗೋಸ್ಕರ ಆನೆಯ ವರ್ಷದಲ್ಲಿ ವಿಶೇಷ ಸಂಸ್ಕಾರಗಳಿಂದೊಡಗೂಡಿದ ದೀಕ್ಷಾ ಕರ್ಮ ( ಉಪನಯನ ) ವನ್ನು ಮಾಡಿ ಆ ಕಾಲದಲ್ಲಿ ಲಿಂಗಾಂಗ ಸಾಮರಸ್ಯವನ್ನು ಬೋಧಿಸುತ್ತಾನೆ. ಈ ದೀಕ್ಷೆಯೇ ಬ್ರಹ್ಮಚಾರಿ- ಗೃಹಸ್ಥ- ವಾನಪ್ರಸ್ಥ- ಸನ್ಯಾಸಿಗಳೆಂಬ ಚತುರಾಶ್ರಮಿಗಳಿಗೆ ಮುಕ್ತಿ ಪಟ್ಟಣವನ್ನು ಹೊಂದಿಸುವ ರಾಜಮಾರ್ಗವಾಗಿರುತ್ತದೆ. ಈ ದೀಕ್ಷೆಯ ಪ್ರಭಾವವನ್ನು ವೀರಶೈವ ಮತಸ್ಥಾಪಕರಾದ ಶ್ರೀ ಜಗದ್ಗುರು **ರೇಣುಕ ಶಿವಾಚಾರ್ಯ**ರು " ದೀಯತೇ ಪರಮಂ ಜ್ಞಾನಂ ಕ್ಷೀಯತೇ ಪಾಶಬಂಧನಂ | ಯಯಾ ದೀಕ್ಷೇತಿ ಸಾ ತಸ್ಯಾಂ ಗುರುರ್ದೀಕ್ಷಾಗುರುಃ ಸ್ಮೃತಃ " ಎಂದು ವರ್ಣಿಸಿದ್ದಾರೆ. ಅಂದಮೇಲೆ, ಈ ದೀಕ್ಷೆಯ ಹಾಗೂ ದೀಕ್ಷಾಚಾರ್ಯನ ಸ್ವರೂಪವು ಜ್ಞಾನಿಗಳಿಗೆ ಗೊತ್ತಾಗುವದಲ್ಲದೆ ಅಜ್ಞಾನಿಗಳಿಗೆ ಎಂದೂ ಗೊತ್ತಾಗಲಾರದು. ಸಕಲಾಶ್ರಮಿಗಳಿಗೂ ಕೂಡ ಮುಕ್ತಿ ಸುಖವನ್ನು ಕೊಡತಕ್ಕ ಇಂಥ ಶಿವದೀಕ್ಷೆಯನ್ನು ಮಾಡುವ ಅಧಿಕಾರವು ಕೇವಲ ಗುರುಸ್ಥಲದ ಶ್ರೀ ಪಟ್ಟಪರಾಧಿಕಾರಿಗಳಿಗಿರುವದೇ ಹೊರತು ಬೇರೊಬ್ಬರಿಗಿಲ್ಲವೆನ್ನುವದು ಧರ್ಮಶಾಸ್ತ್ರದಿಂದಲೂ ವೃದ್ಧ ಪರಂಪರೆಯಿಂದಲೂ ಲೋಕಪ್ರಸಿದ್ಧವೇ ಅದೆ. ಹೀಗಿರುವ ವಿಷಯದಲ್ಲಿ ಭ್ರಮಿತ ಮತಿಯಾದ ಯಾವದಾದರೊಂದು ಮಾನವ ಶ್ವಾನವು ಮನಸ್ಸಿಗೆ ಬಂದಂತೆ ಕೂಗಿದರೆ ಅದರಿಂದಾಗುವ ಕ್ಷತಿಯಾದರೂ ಏನು? ಅಸ್ತು! ಮುಕ್ತಿ ದಾಯಕವಾದ ಈ ದೀಕ್ಷೆಯನ್ನು ಮಾಡತಕ್ಕ ಗುರುಮೂರ್ತಿಗಳು ವೀರಶೈವ ಧರ್ಮಶಾಸ್ತ್ರದ ಸ್ವರೂಪವನ್ನು ಚನ್ನಾಗಿ ಅರಿತವರಾಗಿಯೂ ಯೋಗಸಾಧನದಲ್ಲಿ ನಿಷ್ಣಾತರಾಗಿಯೂ ಇರಬೇಕು. ಯಾಕಂದರೆ ಮಾಂಸ ಪಿಂಡಮಯವಾದ ಶಿಷ್ಯನ ದೇಹವನ್ನು ಮಂತ್ರ ಪಿಂಡಮಯವನ್ನಾಗಿ ಮಾಡಬೇಕಾದ ವಿಷಯದಲ್ಲಿ ಯೋಗ ಕ್ರಿಯೆಯೇ ಮುಖ್ಯಾಂಗವಾಗಿರುತ್ತದೆ. ಈ ರಹಸ್ಯವನ್ನರಿಯದೆ ಸುಮ್ಮನೆ ಒಟ ಒಟವೆನ್ನುತ್ತ ಮಸ್ತಕದ ಮೇಲೆ ನಾಲ್ಕು ಬಿಲ್ವದಲಗಳನ್ನು ಚಲ್ಲಿದರೆ ದೀಕ್ಷೆಯೆನಿಸಿಕೊಳ್ಳಲಾರದು. ಈ ತರದ ದೀಕ್ಷೆಯಿಂದ ದೀಕ್ಷಿತ ವಟುವಿಗೆ ಯಾವ ಪ್ರಯೋಜನವೂ ದೊರೆಯಲಾರದು. ಮಾಡುವದೇನು? ಕಲಿಕಾಲ ವೈಚಿತ್ರ್ಯದಿಂದ ಅದರಲ್ಲಿ ಬಸವನ ಕಾಲದಿಂದ ನಮ್ಮ ಧರ್ಮದಲ್ಲಿ ವೈದಿಕ ಕ್ರಿಯೆ

ಗಳೆಲ್ಲ ಲುಪ್ತಗಳಾಗಿ ಸಂಸ್ಕೃತ ಶಿಕ್ಷಣವು ಕ್ಷೀಣದಶೆಯನ್ನು ಹೊಂದಿ " ವೇದಗಳ ಹಲ್ಲು ಮುರಿಯುವೆ- ಆಗಮಗಳ ಮೂಗು ಕೊಯ್ಯುವೆ- ಹದಿನೆಂಟು ಜಾತಿಯ ಕೆರಹಿನಟ್ಟಿಗೆ ಸರಿಯೆಂಬೆ " ಇವೇ ಮೊದಲಾದ ಅಮಂಗಲವಾಕ್ಯಗಳಿಂದೊಡಗೂಡಿದ ವಚನಗಳ ಆರ್ಭಟದಿಂದ ಈ ಪವಿತ್ರ ಮತವು ಪರಮತಗಳಲ್ಲಿ ಹೇಳಲಾರದಷ್ಟು ಹೇಯವೆನಿಸಿಕೊಂಡಿವೆ. ಸಂಸ್ಕೃತ ಶಿಕ್ಷಣಕ್ಕೆ ಬರೆಯನ್ನು ಹಾಕಿ ಇಂಥ ವಚನಜಾಲದೊಳಗೆ ಸಿಲುಕಿ ನರಳುತ್ತಿರುವ ಗುರುಗಳ ಸಂಖ್ಯೆಯು ನಮ್ಮಲ್ಲಿ ಹೆಚ್ಚಿರುವದಲ್ಲದೆ ಧರ್ಮಶಾಸ್ತ್ರಜ್ಞರ ಸಂಖ್ಯೆಯು ಅತಿವಿರಳವಾಗಿರುವದು. ಇತ್ತೀಚೆಗೆ ಪೂರ್ವಾಚಾರ್ಯರ ಕೃಪೆಯಿಂದ ಅನೇಕ ಗುರುಸ್ಥಲ ಮಠಾಧಿಕಾರಿಗಳು ವೈದಿಕ ವಿದ್ಯಾವಿಶಾರದರಾಗುತ್ತ ನಡೆದಿರುವರು. ಆದಾಗ್ಯೂ ಇನ್ನೂ ಅಸಂಖ್ಯಾತ ಪಟ್ಟಚರಮೂರ್ತಿಗಳು ಸಂಸ್ಕೃತ ವಿದ್ಯೆಯನ್ನು ಕಲಿಯದೆ ಕೇವಲ ಕನ್ನಡ ವಿದ್ಯೆಯನ್ನು ಕಲಿತು ವೈದಿಕ ಕ್ರಿಯಾಚಾರಶೂನ್ಯರಾಗಿರುವರು. ಈ ಮಹನೀಯರು ಮಂಗಲವೇಷಾಲಂಕೃತರಾಗಿ ಶುದ್ಧ ಮಡಿಯಿಂದ ದೀಕ್ಷೆಯನ್ನು ಮಾಡುವದೊತ್ತಟ್ಟಿಗಿರಲಿ! ದೀಕ್ಷೆಯ ಕಾಲಕ್ಕೆ ಸ್ನಾನವನ್ನು ಮಾಡದೆ ಅಂಗಿಯನ್ನು ತೊಟ್ಟುಕೊಂಡು ತಲೆಗೆ ರೇಶಮಿಯ ಮಡಿಯನ್ನು ತಿದ್ದಿ ಸುತ್ತಿಕೊಂಡು ಒಂದು ಅತಿ ಪ್ರಾಚೀನವಾದ ಸೊಬರದ ಮೇಲೆ ಕಂಬಳಿಯನ್ನು ಹಾಸಿಕೊಂಡು ಬೀಗರ ಮನೆಗೆ ಹೋದ ಬೀಗರಂತೆ ಸುಖವಾಗಿ ಕುಳಿತುಕೊಂಡು ಅಂಗಲಿಂಗ ಸಂಸ್ಕಾರಗಳನ್ನು ಮಾಡದೆ ವ್ಯರ್ಥವಾಗಿ ಘಂಟಾನಾದವನ್ನು ಮಾಡಿಸುತ್ತಾ ದೀಕ್ಷಾ ಕರ್ಮಕ್ಕೆ ನಿಷೇಧವೆನಿಸಿಕೊಂಡ ರಾತ್ರಿ ಸಮಯದಲ್ಲಿಯೇ ಒಂದು ತಾಸಿನೊಳಗೆ ದೀಕ್ಷೆಯನ್ನು ಮಾಡಿಬಿಡುವರು. ದೀಕ್ಷಾ ಕಾಲದಲ್ಲಿ ಮಂತ್ರಪೂರ್ವಕವಾಗಿ ಶಿಖೆಯನ್ನು ಬಿಡಿಸಬೇಕೆಂದು ಧರ್ಮಶಾಸ್ತ್ರವು ಸಿಂಹನಾದವನ್ನು ಮಾಡುತ್ತಿದ್ದಾಗ್ಯೂ ಅದನ್ನು ಲಕ್ಷ್ಯಕ್ಕೆ ತರದೆ ಯಾವತ್ತು ತಲೆಯನ್ನು ಒಳ್ಳೇ ನುಣುಪಾಗಿ ಬೋಳಿಸಿ ಪತಿಹೀನ ಬೋಳಿಗಳಂತೆ ವಟುಗಳನ್ನು ಅಮಂಗಲರನ್ನಾಗಿ ಮಾಡಿ ಶೂದ್ರಪದ್ಧತಿಯನ್ನು ಹಬ್ಬಿಸುವರು. ಈ ಅಮಂಗಲ ಪದ್ಧತಿಯು ನಮ್ಮ ಧರ್ಮದಲ್ಲಿ ವಿಶೇಷವಾಗಿ ವಿರಕ್ತರಿಂದಂಟಿಕೊಂಡಿರುವದು. ಈ ತರದ ಧರ್ಮ ದ್ರೋಹಾತ್ಮಕ ಪದ್ಧತಿಗೆ ಧಿಕ್ಕಾರ! ಧಿಕ್ಕಾರ!! ಶಿವ! ಶಿವ! ಹೀಗಾಗೋಣದರಿಂದ ಈ ಪವಿತ್ರ ಧರ್ಮವು ಸುಧಾರಿಸುವ ಬಗೆ ಹೇಗೆ? . ಆದಕಾರಣ ಸಂಸ್ಕೃತ ಶಿಕ್ಷಣವನ್ನು ಹೊಂದದ ಈ ತರದ ಅನ್ಯಾಯ ಪದ್ಧತಿಗಳಿಂದೊಡಗೂಡಿದ ಪಟ್ಟಚರಮೂರ್ತಿಗಳು ಸುಧಾ

ರಿಸಿ ವೇದೋಕ್ತವಾಗಿ ದೀಕ್ಷೆಯನ್ನು ಮಾಡಿ ಧರ್ಮವನ್ನು ಉದ್ಧರಿಸಲೆಂಬ ಉದ್ದೇಶದಿಂದ ಬಹು ಶ್ರಮವನ್ನು ವಹಿಸಿ ಅತಿ ಸರಳ ರೀತಿಯಿಂದ ಈ ಗ್ರಂಥವನ್ನು ಕನ್ನಡದಲ್ಲಿ ಬರೆದಿದೆ. ಆದ್ದರಿಂದ ಈ ಗ್ರಂಥವನ್ನು ಸಂಪೂರ್ಣವಾಗಿ ಓದಿ ತಿಳಿದುಕೊಂಡು ಇದರಲ್ಲಿದ್ದಂತೆ ಕ್ರಮಪ್ರಕಾರವಾಗಿ ದೀಕ್ಷೆಯನ್ನು ಮಾಡಬೇಕು. ಈ ಶಿವದೀಕ್ಷೆಯನ್ನು ಲನೆಯ ವರ್ಷದಲ್ಲಿಯೇ ಮಾಡಬೇಕು. ,, ಗರ್ಭಾಷ್ಟಮೇ ಕೃತಾ ದೀಕ್ಷಾ ಮುಖ್ಯಾ ಸಾ ಷೋಡಶಾವಧಿ | ಗೌಣಾ ತದೂರ್ಧ್ವಮಧಮಾ ವೀರಶೈವಾನ್ವಯಾಯಿನಾಂ ,, | ಎಂಬ ಶಿವಾಗಮವಾಕ್ಯಕ್ಕನುಸಾರವಾಗಿ ಲನೆಯ ವರ್ಷದಲ್ಲಿ ಮಾಡುವದು ಉತ್ತಮವೆಂದೂ, ೧೬ ವರ್ಷಗಳವರೆಗೆ ಮಾಡುವದು ಮಧ್ಯಮವೆಂದೂ ೧೬ ವರ್ಷಗಳಾದ ಮೇಲೆ ಮಾಡುವದು ಅಧಮವೆಂದೂ ತಿಳಿಯಬೇಕು. ಲನೆಯ ವರ್ಷದೊಳಗೆ ದೀಕ್ಷೆಯನ್ನು ಮಾಡಬಾರದು. ಒಂದು ಪಕ್ಷದಲ್ಲಿ ಮಾಡಿದ್ದಾದರೆ ಅದಕ್ಕೆ ದೀಕ್ಷೆಯೆಂದು ಎಂದೂ ಅನ್ನಬಾರದು. ಅಂಥ ದೀಕ್ಷಿತ ವಟುವನ್ನು ಯಾರೂ ಮನ್ನಿಸಬಾರದು. ಕೆಲವು ಮಹನೀಯರಾದ ಪಟ್ಟಚರಮೂರ್ತಿಗಳು ಅಜ್ಞಾನದಿಂದಾಗಲಿ ಅಥವಾ ದುಡ್ಡಿನ ಆಶೆಗೆ ಬಿದ್ದಾಗಲಿ ಲನೆಯ ವರ್ಷದೊಳಗಿನ ಬಾಲಕರಿಗೆ ದೀಕ್ಷೆಯನ್ನು ಮಾಡುತ್ತಾರೆ. ಶಾಸ್ತ್ರದ ಈ ಮಹಾದೋಷವು ಅವರ ಪದರಿನಲ್ಲಿಯೇ ಬೀಳುವದು. ಆದ ಕಾರಣ ಯಾವ ಅಧಿಕಾರಿಗಳಾದರೂ ಇಂಥ ಧರ್ಮ ವಿರುದ್ಧ ಕಾರ್ಯವನ್ನು ಮಾಡಬಾರದು. ಇನ್ನು ಕೆಲವು ವಿಚಾರ ಶೂನ್ಯರಾದ ಪಟ್ಟಚರಾಧಿಕಾರಿಗಳು ಧನಾಶೆಯ ಬಲೆಯೊಳಗೆ ಶಿಲುಕಿ ಮಠಪತ್ತಿ - ಗಣಾಚಾರಿ - ಸ್ಥಾವರ - ಪೂಜಾರಿ ಮೊದಲಾದ ಅಪೂಜ್ಯರಿಗೆ ಮಾಹೇಶ್ವರ ದೀಕ್ಷೆಯನ್ನು ಕೊಟ್ಟು ಊರೂರುಗಳಲ್ಲಿ ತಂಟೆಯನ್ನೆಬ್ಬಿಸಿ ಮೊದಲಿನ ನಿಜವಾದ ಮಠಸ್ಥರ ಮರ್ಯಾದೆಯನ್ನು ಕಳೆದು ಸಮಾಜವನ್ನು ಹಾಳ ಮಾಡಲುದ್ಯುಕ್ತರಾಗಿರುವರು. ಇನ್ನು ಕೆಲವರು ದ್ರವ್ಯದ ಆಶೆಯಿಂದ ಕಂಡ ಕಂಡ ಶೂದ್ರ ಜನರಿಗೆ ಲಿಂಗವನ್ನು ಕಟ್ಟಿ ಅವರಲ್ಲಿ ತಿಂದು ಬಳಿಕೆಯನ್ನು ಮಾಡಿ ಪರಮ ಪವಿತ್ರವಾದ ವೀರಶೈವ ಬ್ರಾಹ್ಮಣ ಧರ್ಮಕ್ಕೆ ಬರೆಯನ್ನು ಹಾಕಲಿಕ್ಕೆ ಹತ್ತಿರುವರು ಇಂಥ ಪಾಪಾತ್ಮರನ್ನು ಯಾರೂ ಮನ್ನಿಸ ಕೂಡದು. ಹಾಗೂ ಅವರಲ್ಲಿ ಬಳಿಕೆ ಮೊದಲಾದವುಗಳನ್ನು ಮಾಡ ಕೂಡದು. ಆದಕಾರಣ ಎಲೋ ಗುರುವರ್ಗದ ಮಹನೀಯರೇ— ಇಂಥ ಧರ್ಮ ಘಾತಕವಾದ ಮಾರ್ಗದಲ್ಲಿ ಪ್ರವೇಶ ಮಾಡದೆ ಧರ್ಮಜಾಗ್ರತಿಯ ಕಡೆಗೆ ಲಕ್ಷವನ್ನೀಯಬೇಕೆಂದು ಬೇಡಿಕೊಳ್ಳುತ್ತೇನೆ.

ನೀವು ಸುಧಾರಿಸಿದರೆ ಸಮಾಜವೆಲ್ಲಾ ಸುಧಾರಿಸುವದು; ಇಲ್ಲದಿದ್ದರೆ ಭ್ರಷ್ಟವಾಗುವದೆಂಬ ಸಂಗತಿಯನ್ನು ಪೂರ್ಣಚಿತ್ತಕ್ಕೆ ತಂದುಕೊಳ್ಳಿರಿ. ನಿಮ್ಮ ಸುಧಾರಣೆಯ ದೆಶೆಯಿಂದಲೇ ಈ ಗ್ರಂಥವು ಕನ್ನಡ ಭಾಷೆಯ ಸರಳ ಶೈಲಿಯಲ್ಲಿ ಬರೆಯಲ್ಪಟ್ಟಿರುವದೆಂದು ಭಾವಿಸಬೇಕು. ಸಂಸ್ಕೃತದಲ್ಲಿ "ವೀರಶೈವ ದೀಕ್ಷಾವಿಧಿ" ಯೆಂಬ ಗ್ರಂಥವು ಮೈಸೂರಲ್ಲಿಯೂ ಹಾಗೂ ಸೊಲ್ಲಾಪುರದಲ್ಲಿಯೂ ಕ್ರಮೇಣ ಕನ್ನಡ ಮಹಾರಾಷ್ಟ್ರ ಟೀಕೆಗಳಿಂದೊಡಗೂಡಿ ಮುದ್ರಿಸಲ್ಪಟ್ಟಿದೆ. ಆದರೆ ಮುದ್ರಾಪಕರು ಅವುಗಳನ್ನು ವಿಶೇಷ ಶೋಧ ಮಾಡದ ಕಾರಣ ಅನೇಕ ವ್ಯತ್ಯಸ್ತಗಳಾಗಿರುವದರಿಂದಲೂ, ಆಚಾರ್ಯನ ಕ್ರಿಯೆಗಳು ಯಜಮಾನನಿಗೂ ಯಜಮಾನನ ಕ್ರಿಯೆಗಳು ಆಚಾರ್ಯನಿಗೂ ಬದ್ದಿರುವದರಿಂದಲೂ, ಟೀಕಾಕಾರರು ಕೆಲ ಕೆಲ ಸಂದರ್ಭಗಳಲ್ಲಿ ಗ್ರಂಥಕರ್ತನ ಅಭಿಪ್ರಾಯವನ್ನು ತಿಳಿಯದೆ ಮನಸ್ಸಿಗೆ ಬಂದಂತೆ ಟೀಕೆಯನ್ನು ಬರೆದಿರುವದರಿಂದಲೂ, ಷಡಧ್ವನ್ಯಾಸ-ಕಲಾನ್ಯಾಸಾದಿಗಳಲ್ಲಿ ವಿಶೇಷ ದೋಷಗಳಿರುವದರಿಂದಲೂ, ಹಾಗೂ ಗುರು ಸಾಂಪ್ರದಾಯದ ಕೆಲವು ವಿಷಯಗಳ ಕೊರತೆಯಿರುವದರಿಂದಲೂ ಈಯಾವತ್ತು ವಿಷಯಗಳನ್ನು ಲಕ್ಷಕ್ಕೆ ತಂದು ಬಹು ಜನರ ಪ್ರಾರ್ಥನೆಯ ಮೇರೆಗೆ ನಾಗನೂರ ಬೃಹನ್ಮಠಾಧ್ಯಕ್ಷರಾದ ಪಂಡಿತ ಶ್ರೀ ಕಾಶೀನಾಥ ಶಾಸ್ತ್ರಿಗಳು ಅನೇಕ ಗ್ರಂಥಗಳನ್ನು ಶೋಧಿಸಿ ಅತಿ ಶುದ್ಧ ರೀತಿಯಿಂದ ಈ ಗ್ರಂಥವನ್ನು ಬರೆದು ಸಮಸ್ತ ಗುರುವರ್ಗಕ್ಕೆ ಮಹೋಪಕಾರವನ್ನು ಮಾಡಿಕೊಟ್ಟಿದ್ದಾರೆ. ಆದಕಾರಣ ಪ್ರತಿಯೊಬ್ಬ ಗುರುಮೂರ್ತಿಗಳು ಇದರಲ್ಲಿರತಕ್ಕ ವಿಷಯವನ್ನು ಸಂಪೂರ್ಣವಾಗಿ ತಿಳಿದುಕೊಂಡು ಅದರಂತೆ ದೀಕ್ಷಾ ಕರ್ಮವನ್ನು ಮಾಡಿ ಶಿವ ಪ್ರೀತಿಗೆ ಪಾತ್ರರಾಗತಕ್ಕದ್ದು ಅವರ ಮುಖ್ಯ ಕರ್ತವ್ಯವಾಗಿರುತ್ತದೆ.

ಈ ಗ್ರಂಥದ ಲೇಖನಾದಿ ಕಾರ್ಯಗಳಲ್ಲಿ ಉಜ್ಜಯನೀ ಗ್ರಾಮವಾಸಿಗಳಾದ ಪಂ। ಬಿ-ಗುರುಸಿದ್ಧ ಶಾಸ್ತ್ರಿಗಳು ವಿಶೇಷ ಸಹಾಯಕರಾದ ಕಾರಣ ಅವರ ಆಭಾರವನ್ನು ಮನ್ನಿಸುತ್ತೇನೆ. ಶಿವಂಭೂಯಾತ್!

ಕುಂದಗೋಳ.
ತಾ|| ೩೦-೬-೧೯೩೪

ಅಖಿಲಭಾರತೀಯ ಗುರುವರ್ಗೋತ್ತೇಜಕ ಸಂಘ
ಸೆಕ್ರೆಟರಿ.
ಪಂ। ಶ್ರೀ ಹರೀಶ್ವರಶಾಸ್ತ್ರೀ ಧರ್ಮಭೂಷಣಃ

# ಮಾಹೇಶ್ವರ ದೀಕ್ಷಾವಿಧಿಯು

## ವಿಷಯಾನುಕ್ರಮಣಿಕೆಯು.


| ವಿಷಯ. | ಪುಟ. |
|---|---|
| ಸಂಕಲ್ಪ | ೩ |
| ಗಣಪತಿಪೂಜಾ | ೩ |
| ಸ್ವಸ್ತಿವಾಚನ | ೫ |
| ನಾಂದೀ ಸಮಾರಾಧನ | ೧೩ |
| ಅಂಕುರಾರ್ಪಣ | ೧೪ |
| ಮಂಟಪದೇವತಾಪ್ರತಿಷ್ಠಾ | ೧೫ |
| ಶಿವಲಿಂಗ ಸಂಸ್ಕಾರ | ೨೧ |
| ಷಡಧ್ವನ್ಯಾಸ | ೨೬ |
| ಅಷ್ಟತ್ರಿಂಶತ್ಕಲಾನ್ಯಾಸ | ೪೨ |
| ವಾಪನ (ಕ್ಷೌರ) ವಿಧಿ | ೪೬ |
| ಮಂಟಪ ಪ್ರವೇಶ | ೪೮ |
| ಪಂಚಕಲಶಸ್ಥಾಪನ ವಿಧಿ | ೫೧ |
| ಶಿವದೀಕ್ಷಾಹೋಮ | ೬೨ |
| ಕೌಪೀನಕಂಥಾಧಾರಣ | ೬೯ |
| ಆಜ್ಞಾದೀಕ್ಷಾ ಉಪಮಾದೀಕ್ಷಾ | ೭೧ |
| ಪಂಚಗವ್ಯಪ್ರಾಶನವಿಧಿ | ೭೧ |
| ಸ್ವಸ್ತಿಕಾರೋಹಣದೀಕ್ಷಾ | ೭೩ |
| ಭೂತಶುದ್ಧಿ | ೭೫ |
| ಜೀವಾತ್ಮ ಸ್ಥಾಪನವಿಧಿ | ೭೮ |
| ದಂಡಭಂಗಿನ್ಯಾಸ | ೭೯ |
| ಶಿವ್ಯಾಂಗಷಡಧ್ವನ್ಯಾಸ | ೮೦ |
| ಶಿವ್ಯಾಂಗಾಷ್ಟತ್ರಿಂಶತ್ಕಲಾನ್ಯಾಸ | ೮೦ |
| ಕಲಶಾಭಿಷೇಕದೀಕ್ಷಾ | ೮೧ |
| ಭೂತಿಪಟ್ಟದೀಕ್ಷಾ | ೮೧ |
| ಆಯತ್ತದೀಕ್ಷಾ | ೮೩ |
| ಶಿವಕಲಾಯೋಜನಕ್ರಮ | ೮೫ |
| ಸ್ವಾಯತ್ತದೀಕ್ಷಾ | ೮೭ |
| ಶಿವಸೂತ್ರಧಾರಣ | ೮೮ |
| ಮಂತ್ರೋಪದೇಶವಿಧಿ | ೮೯ |
| ಊರ್ಧ್ವಾಂಗುಲಿ ಪಾಣಿನಿಧಾನ | ೯೧ |
| ಮೇಖಲಾಬಂಧನ | ೯೨ |
| ದಂಡಧಾರಣ | ೯೨ |
| ಕಮಂಡಲುಭಿಕ್ಷಾಪಾತ್ರಧಾರಣ | ೯೩ |
| ಆಚಾರೋಪದೇಶಕ್ರಮ | ೯೩ |
| ಸ್ವಿಷ್ಟಕೃದ್ಧೋಮ | ೯೩ |
| ಪ್ರಾಯಶ್ಚಿತ್ತಾಜ್ಯಹೋಮ | ೯೪ |
| ಮಾರ್ಜನವಿಧಿ | ೯೬ |
| ಅಗ್ನ್ಯುತ್ಸರ್ಜನ | ೯೯ |
| ಪಂಚಬ್ರಹ್ಮಕಲಶೋತ್ಸರ್ಜನ | ೯೯ |
| ಭಿಕ್ಷಾಟನವಿಧಿ | ೯೯ |

## ಶ್ರೀಜಗದ್ಗುರು ಪಂಚಾಚಾರ್ಯರ್ಾಃ ಪ್ರಸೀದಂತು.

### " ಶಿವದೀಕ್ಷೆಗೆ ಬೇಕಾಗುವ ಸಾಮಾನುಗಳ ವಿವರವು. "

ಪಂಚಸೂತ್ರದಲಿಂಗ
ಅಷ್ಟಬಂಧ
ರಜತ ಅಥವಾ ಸುವರ್ಣಗಣಪತಿ ವಿಗ್ರಹ
ಪಂಚರತ್ನಗಳು
೨ ಹೊಸ ತಂಬಿಗೆಗಳು
೫ ಹೊಸ ತಾಲಿಗಳು ೩ ಅರ್ಘ್ಯಸವಟ ಗಳು
ವಟುವಿಗೆ ಧರಿಸುವ ಹೊಸ ಪಂಜಿಗಳು
೭ ಮೊಳದ ಹೊಸ ಪಂಜೆ ೧ ಹಸರು-ಕೆಂಪುನೀಲಿ-ಹಳದಿ-ಬಿಳಿ ಬಣ್ಣದ ೫ ವಸ್ತ್ರಗಳು
೫ ಬಿಳಿ ವಸ್ತ್ರಗಳು
೮ ಹೊಸ ಗದ್ದುಗೆ ಕಂಬಳಿಗಳು
ಋತ್ವಿಜರಿಗೆ ೫ ಹೊಸ ಮಡಿಗಳು
ಶಿವಪೂಜಾ ಸಾಮಾನುಗಳು
ಹೊಸ ರುದ್ರಾಕ್ಷ ಮಾಲಾ
ಭಸ್ಮ - ದಂಡ - ಕಮಂಡಲು
ಭಿಕ್ಷಾಪಾತ್ರ ( ಜೋಳಿಗೆ )
ಕೌಪೀನ-ಕಟಿಸೂತ್ರ
೧ ಹೊಸ ಬಿದುರು ಪುಟ್ಟಿ
೧ ಕುಕ್ಕುಡಿ
ಹುತ್ತದ ಮಣ್ಣು
ಆಕಳ ಕುಳ್ಳಿನ ಪುಡಿ
ಮಡುವಿನ ಕೆಸರು
೧ ಶೇರು ಆಕಳ ತುಪ್ಪ-ಆಕಳ ಹಾಲು ಆಕಳ ಮೊಸರು-ಗೋಮೂತ್ರ-ಗೋಮಯ

ಗೋರೋಜನ-ಜೇನುತುಪ್ಪ
ಬತ್ತದ ಅರಳು
ಗಂಧದಕಟ್ಟಿಗೆ-ಮುತ್ತಲಕಟ್ಟಿಗೆ-ಅತ್ತಿಕಟ್ಟಿಗೆ-ಬಿಲ್ವಕಟ್ಟಿಗೆ-ಅರಳಿಕಟ್ಟಿಗೆ-ಬನ್ನಿಕಟ್ಟಿಗೆಗಳು.
೧ ಪೆಂಡಿ ದರ್ಭೆ ನೆಲ್ಲು-ಅಕ್ಕಿ-ಹೆಸರು-ಕಡಲಿ-ಎಳ್ಳು-ಗೋಧಿ-ಸಾವಿ.
೪ ಬಾಳೆಕಂಬಗಳು-ಕಬ್ಬು-ತಳಿರುಗಳು.
೧೫ ತೆಂಗಿನಕಾಯಿಗಳು
೧೦ ಕೊಬ್ಬರಿಬಟ್ಟಲಗಳು
ಎಲೆ-ಬೆಟ್ಟಡಕೆಗಳು
ಸಕ್ಕರಿ-ಉತ್ತತ್ತಿ ಬಾಳೇಹಣ್ಣು-ಲಿಂಬೇಹಣ್ಣುಗಳು.
ಗಂಧ-ಅಕ್ಷತೆ-ನಾನಾವಿಧ ಪತ್ರಪುಷ್ಪ-ಧೂಪ-ದೀಪ-ನೈವೇದ್ಯ-ತಾಂಬೂಲ-ದಕ್ಷಿಣಾ-ಅರಿಶಿಣ-ಕುಂಕುಮ-ರಂಗವಲ್ಲಿಹಿಟ್ಟು.

" ಅರ್ಘ್ಯದ ಸಾಮಾನುಗಳು "

ದರ್ಭೆ-ಬಿಳೆಎಳ್ಳು-ಬಿಳೆಸಾಸಿವೆ-ಜವೆಗೋಧಿ-ನೆಲ್ಲು-ಆಕಳಹಾಲು.

" ಪಾದ್ಯದ ಸಾಮಾನುಗಳು "

ಬಿಳೆಸಾಸಿವೆ-ಕೇಸರಿ-ಕರಿಕೆ-ಕೋಷ್ಟ-ಬಾದಳಬೇರು-ಪಚ್ಚಕರ್ಪೂರ

" ಆಚಮನೀಯದ ಸಾಮಾನುಗಳು "

ಜಾಜೀಕಾಯಿ-ಕಚೋರ-ಕರ್ಪೂರ-ಕೋಷ್ಟ-ಕೇಸರಿ-ಯಾಲಕ್ಕಿ.

## ಮಾಹೇಶ್ವರ ದೀಕ್ಷಾವಿಧಿಯಲ್ಲಿರತಕ್ಕ ಮಂತ್ರಗಳ ಶುದ್ಧಾಶುದ್ಧ ಪತ್ರಿಕೆಯು.

| ಅಶುದ್ಧ | ಶುದ್ಧ | ಪುಟ | ಪಂಕ್ತಿ |
|---|---|---|---|
| ನಪಾತ್ಸೇದ | ಸಪಾತ್ಸೇದು | ೬ | ೧೮ |
| ವನಸಾ | ಮನಸಾ | ೭ | ೩ |
| ಆಯು | ಆಯು: | ೭ | ೧೧ |
| ಶದ್ಧೇ | ಶ್ರದ್ಧೇ | ೯ | ೧೨ |
| ಸಸ್ತಿನಃ | ಸ್ವಸ್ತಿನಃ | ೧೧ | ೨ |
| ಸವಾಃ | ನದಾಃ | ೧೨ | ೨ |
| ಜನ್ವಥ | ಜೆನ್ವಥ | ೧೫ | ೧೭ |
| ಅಗೇ | ಅಗ್ನೇ | ೧೬ | ೨೧ |
| ಮಾದಯ:ಸ | ಮಾದಯಸ್ವ | ೧೮ | ೧೮ |
| ನಿವೇಶೀನಿ | ನಿವೇಶಿನೀ | ೨೦ | ೪ |
| ರುದಾ | ರುದ್ರಾ | ೨೦ | ೧೪ |
| ಈಶರೀಂ | ಈಶ್ವರೀಂ | ೨೧ | ೬ |
| ಚಿದ್ರೇಣ | ಚ್ಛಿದ್ರೇಣ | ೨೧ | ೧೫ |
| ಮನಾತು | ಪುನಾತು | ೨೨ | ೧೯ |
| ಪ್ರತ್ಯೈಂ | ಪ್ರತ್ಯೈಂಪವಿತ್ರಂ | ೨೩ | ೧೭ |
| ಸಹವ | ಸಹವಾ | ೨೩ | ೧೮ |
| ಹಾ | ಹಾಂ | ೪೨ | ೧೬ |
| ಧಿಮಹಿ | ಧೀಮಹಿ | ೪೩ | ೨ |
| ಯೇನೆ | ಯೇನ | ೪೭ | ೨೦ |
| ಸಚಾರು | ಸುಚಾರು | ೫೦ | ೮ |
| ಓಷಧಯಂ | ಓಷಧಯಃ | ೫೨ | ೪ |
| ಶ್ಯೇನೋಃ | ಶ್ಯೇನೊ | ೫೨ | ೯ |
| ಪ್ರಾಹಯಿಷೇ | ಪ್ರಾಹ್ವಯೇ | ೫೩ | ೪ |
| ನಮಸ್ತ್ಮೆ | ನಮಸ್ತೆ | ೫೪ | ೧೫ |

| ಅಶುದ್ಧ | ಶುದ್ಧ | ಪುಟ | ಪಂಕ್ತಿ |
|---|---|---|---|
| ಫುಷ್ಟಿಣೇಃ | ಪುಷ್ಪಿಣೇಃ | ೫೪ | ೯ |
| ಪಂಡಿತಾರಾಧ್ಯ | ಪಂಡಿತಾರಾಧ್ಯಂ | ೫೬ | ೨೩ |
| ಲಶಾ | ಕಲಶಾ | ೫೭ | ೨ |
| ಸನ್ಯೋಜಾತಾಸ್ಯ | ಸದ್ಯೋಜಾತಸ್ಯ | ೫೯ | ೩ |
| ಪಶ್ಚಿಮ | ಪಶ್ಚಿಮ ಕಲಶೇ | ೬೦ | ೧೫ |
| ಪ್ರತಿಷ್ಠೈರ್ಥೇ | ಪ್ರತಿಷ್ಠಾರ್ಥೇ | ೬೧ | ೧೬ |
| ಸಪ್ತಹಸಾ | ಸಪ್ತಹಸ್ತಾ | ೬೪ | ೩ |
| ವೃಷಭೋ | ವೃಷಭೋ | ೬೪ | ೪ |
| ಸನಿಷ್ಯಮಾಣಃ | ಸಜನಿಷ್ಯಮಾಣಃ | ೬೪ | ೧೬ |
| ವ್ರತೋಸ್ಮಿ | ವೃತೋಸ್ಮಿ | ೬೬ | ೩ |
| ಧ್ಯಸ್ವರ್ಥಸ್ವ | ಧ್ಯಸ್ವ | ೬೮ | ೧೯ |
| ಸರ್ವೆ | ಸರ್ವ | ೭೨ | ೧ |
| ಆಪ್ಯಾಯುಸ್ವ | ಆಪ್ಯಾಯುಸ್ವ | ೭೨ | ೩ |
| ೩೪–೪೦ | ೨೬ರಿಂದ೪೧ | ೮೦ | ೧೮ |
| ತದ್ವೈಶ್ಯೃತಂ | ತದ್ವೈದ್ಯೃತಂ | ೮೫ | ೧೬ |
| ತ್ಯಣಾಪವಾ | ತ್ಯಣೂಪಮಾ | ೮೫ | ೨೩ |
| ಮುವಾಮುಷ್ಯ | ಮಮಾಮುಷ್ಯ | ೮೮ | ೨ |
| ಈಶ ನಾಯನಮಃ | ಈಶಾನಾಯನಮಃ ಶಿರಸಿ | ೯೦ | ೧೦ |
| ಅಸುರೋ | ಅಸುರೋ | ೯೨ | ೧೭ |
| ಅಗ್ನಯೇ | ಅಗ್ನಯೇ | ೯೩ | ೨೧ |
| ಸ್ವಿಷ್ಟಕೃತೇ | ಸ್ವಿಷ್ಟಕೃತೇ | ೯೪ | ೨ |
| ಯತ್ವೇ | ಯದ್ವೋ | ೯೫ | ೧೭ |
| ಆರಾಯೋ | ಆರಾಯೋ | ೯೫ | ೨೧ |
| ಅಸ್ಮಾಗ್ಂ | ಅಸ್ಮಾಗ್ಂ | ೯೫ | ೨೧ |
| ನಿದೇನ | ನಿಧೇತನ | ೯೫ | ೨೨ |
| ಕ್ರುತಶೋ | ಋತುಶೋ | ೯೬ | ೧೬ |
| ಪರ್ಣವಸಿ | ಪೂರ್ಣಮಸಿ | ೯೭ | ೧ |

| ಅಶುದ್ಧ | ಶುದ್ಧ | ಪುಟ | ಪಂಕ್ತಿ |
|---|---|---|---|
| ಮಾವೇಕ್ಷ್ವೇಷ್ಟ್ರಾ | ಮಾವೇಕ್ಷ್ವೇಷ್ಟ್ರಾಃ | ೯೭ | ೩ |
| ಸ್ವಪಾಥೋ | ಸ್ವಂಪಾಥೋ | ೯೮ | ೨ |
| ವರೂಥಾಃ | ವರೂಥ್ಯಾಃ | ೯೮ | ೧೨ |
| ಸನೋಬೇಧಿ | ಸನೋಬೋಧಿ | ೯೮ | ೧೩ |
| ಓ ಜಮೇ | ಓಂ ಜಮೇ | ೯೮ | ೧೫ |
| ತಿರಿಕ್ತ | ತಿರಿಕ್ತಂ | ೯೮ | ೧೬ |
| ಬುದಿಂ | ಬುದ್ಧಿಂ | ೯೮ | ೧೭ |
| ಧ್ವೆಹಿ | ಧೇಹಿ | ೯೮ | ೨೫ |
| ಪಿತವ್ವಂತು | ಪಿತನ್ವಂತು | ೧೦೦ | ೭ |
| ವಿಚಿತಾ | ವಿಚಿತಃ | ೧೦೦. | ೨೦ |

ನೋಟ:— ಮಂತ್ರಗಳಲ್ಲಿರತಕ್ಕ ಅಶುದ್ಧಗಳನ್ನು ಆ ಆ ಪುಟಗಳಲ್ಲಿ ನೋಡಿ ಸರಿಯಾಗಿ ತಿದಿ ಕೊಂಡು ಪಠಿಸಬೇಕು.

॥ ಶ್ರೀ ಜಗದ್ಗುರು ಪಂಚಾಚಾರ್ಯೇಭ್ಯೋನಮಃ ॥

# ಶ್ರೀ ಮಾಹೇಶ್ವರ ದೀಕ್ಷಾವಿಧಿಃ



ಈ ಮಾಹೇಶ್ವರ ದೀಕ್ಷಾವಿಧಿಯನ್ನು ಅಚ್ಚು ಮಾಡಿಸುವುದಕ್ಕಾಗಿ ಕೊಟ್ಟೂರು ಗ್ರಾಮ ನಿವಾಸಿಗಳಾದ ವೆ॥ ಮ॥ ಜಾಗಟಗೇರಿ ಚನ್ನವೀರಪ್ಪಯ್ಯನವರು ಹಾಗೂ ಹೊಸಪೇಟೆ ತಾಲೂಕು ಕಾಕುಬಾಳು ಗ್ರಾಮ ವಾಸಿಗಳಾದ ಮ॥ ರಾ॥ ಸದ್ಭಕ್ತರಾಜಾಪುರ ಸಿದ್ಧಪ್ಪನವರು ಉದಾರಭಾವದಿಂದ ದ್ರವ್ಯ ಸಹಾಯ ಮಾಡಿದ ಕಾರಣ ಇವರ ಉಪಕಾರವು ಚಿರಸ್ಮರಣೀಯವಾಗಿದೆ. ಇಂಥ ಧರ್ಮಾತ್ಮರಿಗೆ ಪರಮಾತ್ಮನು ಸದಾ ಈಪ್ರಕಾರವಾದ ಧರ್ಮಬುದ್ಧಿಯನ್ನು ಅನುಗ್ರಹಿಸಲೆಂದೂ ಇವರಿಗೆ ಉತ್ತರೋತ್ತರ ಅಭಿವೃದ್ಧಿಯನ್ನುಂಟುಮಾಡಲೆಂದೂ ಹಾರೈಸುತ್ತೇವೆ.

ಶುಭಂಭೂಯಾತ್! ಭದ್ರಂ ಭೂಯಾತ್ !!

ಕುಂದಗೋಳ } ಅಖಿಲ ಭಾರತೀಯ ಗುರುವರ್ಗೋತ್ತೇಜಕ
ಡಿ॥ ಧಾರವಾಡ } ಸಂಘ ಸೆಕ್ರೆಟರಿ.

ಶ್ರೀಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು

# ಶ್ರೀ ಮಾಹೇಶ್ವರದೀಕ್ಷಾವಿಧಿಃ

ಪಂಚಾನನತನೂದ್ಭೂತಾನ್ ಪಂಚಾಕ್ಷರಮನೂಪಮಾನ್ ।
ಪಂಚಸೂತ್ರಕೃತೋ ವಂದೇ ಪಂಚಾಚಾರ್ಯಾನ್ ಜಗದ್ಗುರೂನ್ ॥೧॥

ಶ್ರೀಮಜ್ಜಗದ್ಗುರು ಪಂಚಾಚಾರ್ಯ ಸಂಪ್ರದಾಯ ಪರಂಪರಾಗತ ಪಟ್ಟಬದ್ಧಾಚಾರ್ಯನು ಪೂರ್ವದಿನದಲ್ಲಿ ಕ್ಷೀರಾಹಾರಿಯಾಗಿದ್ದು ಉಕ್ತಕಾಲದಲ್ಲಿ ಮಂಗಲಸ್ನಾನವನ್ನು ಮಾಡಿ ನಿತ್ಯ ಕ್ರಿಯೆಗಳನ್ನು ತೀರಿಸಿಕೊಂಡು ಗುರುಚಿಹ್ನಗಳಾದ ಪಂಚಮುದ್ರಾದಿಗಳಿಂದಲಂಕೃತನಾಗಿ ಹಸ್ತದಲ್ಲಿ ದರ್ಭೆಯ ಉಂಗರವನ್ನು ಧರಿಸಿಕೊಂಡು ಗೋಮಯದಿಂದ ಸಾರಿಸಲ್ಪಟ್ಟ ರಂಗವಲ್ಯಾದಿಗಳಿಂದಲಂಕೃತವಾದಶುದ್ಧ ಭೂಮಿಯಲ್ಲಿ ದರ್ಭಾಸನವನ್ನು ಹಾಸಿಕೊಂಡು ಪೂರ್ವಾಭಿಮುಖನಾಗಿ ಕುಳಿತುಕೊಳ್ಳಬೇಕು. ಆ ವೇಳೆ ವಟುವಿಗೆ ಧರಿಸುವದಕ್ಕೋಸ್ಕರ ಸೂತ್ರಾನುಸಾರವಾಗಿ * ವಸ್ತ್ರ—ದಂಡ ಕಮಂಡಲುಗಳನ್ನೂ ಭಸ್ಮಘುಟಿಕಾ—ಭಿಕ್ಷಾಪಾತ್ರ—ಪಂಚಸೂತ್ರ ಘಟಿತ ಶಿವಲಿಂಗ—ದರ್ಭಮೇಖಲಾ—ಕೌಪೀನ—ಕಟಿಸೂತ್ರ— ರುದ್ರಾಕ್ಷಮಾಲಾ ಶಿವಪೂಜಾ ಸಾಹಿತ್ಯಾದಿಗಳನ್ನೂ ಸಂಗ್ರಹಿಸಿಕೊಳ್ಳತಕ್ಕದ್ದು. ಅನಂತರ ಮಠಸ್ಥಲಸಮುತ್ಪನ್ನನಾದವಟುವು ಪೂರ್ವದಿನದಲ್ಲಿ ಕ್ಷೀರಾಹಾರಿಯಾಗಿದ್ದು ಉಕ್ತಕಾಲದಲ್ಲಿ ದಂತಧಾವನ ಪೂರ್ವಕ ಮಂಗಲಸ್ನಾನವನ್ನು ಮಾಡಿ ಮಂಗಲವೇಷಾಲಂಕೃತನಾಗಿ ಫಲಯುಕ್ತವಾದ ಒಂದು ಪಾತ್ರೆಯಲ್ಲಿ ಶಕ್ತ್ಯನುಸಾರ ದ್ರವ್ಯವನ್ನಿಟ್ಟುಕೊಂಡು ಗುರುಸನ್ನಿಧಿಯಲ್ಲಿ ಬಂದು ವಿನಯಾನ್ವಿತನಾಗಿ.—

---

* ಪದ್ಮಪಿಡಿ ಸೂತ್ರಾನುಯಾಯಿಗಳಿಗೆ = ಹಸಿರು ವಸ್ತ್ರ – ಅರಳಿದಂಡ — ಹಸುರುಕಮಂಡಲು
ವೃಷ್ಟಿ ಸೂತ್ರಾನುಯಾಯಿಗಳಿಗೆ = ಕೆಂಪು ವಸ್ತ್ರ — ಮುತ್ತಲದಂಡ ತಾಮ್ರಕಮಂಡಲು
ಲಂಬನ ಸೂತ್ರಾನುಯಾಯಿಗಳಿಗೆ = ನೀಲ ವಸ್ತ್ರ – ಬಿದರುದಂಡ – ಕಬ್ಬಿಣಕಮಂಡಲು
ಮುಕ್ತಾ ಗುಚ್ಛ ಸೂತ್ರಾನುಯಾಯಿಗಳಿಗೆ = ಬಿಳಿ ವಸ್ತ್ರ — ಆಲದದಂಡ — ಕಂಚಿನಕಮಂಡಲು
ಪಂಚ ವರ್ಣಸೂತ್ರಾನುಯಾಯಿಗಳಿಗೆ = ಕಾವಿವಸ್ತ್ರ – ಸ್ಫಟಿಕದಂಡ — ಸುವರ್ಣಕಮಂಡಲು

ಭೋಕಲ್ಯಾಣ ಮಹಾಭಾಗ ಶಿವಜ್ಞಾನಮಹೋದಧೇ ।
ಆಚಾರ್ಯವರ್ಯ ಸಂಪ್ರಾಪ್ತಂ ರಕ್ಷಮಾಂ ಭವರೋಗಿಣಂ ॥

ಎಂದು ಪ್ರಾರ್ಥಿಸಿ ಆ ಪಾತ್ರೆಯನ್ನು ಗುರುವಿನ ಮುಂದಿಟ್ಟು ಸಾಷ್ಟಾಂಗ ಪ್ರಣಾಮವನ್ನು ಮಾಡಬೇಕು. ಆ ಮೇಲೆ ಗುರುಗಳು ಈ ವಟುವು ಶುದ್ಧಮಠಸ್ಥಲ ಸಮುತ್ಪನ್ನನಹುದೋ ಅಲ್ಲವೋ ಎನ್ನುವದನ್ನು ಸಭಿಕರಿಂದ ತಿಳಿದುಕೊಂಡು ಮಠಸ್ಥಲ ಸಂಪ್ರದಾಯಸ್ಥನಾದಪಕ್ಷದಲ್ಲಿ ಅವನ ನಖನೇತ್ರಾದಿಗಳನ್ನು ಪರೀಕ್ಷಿಸಿ " ತಥಾಸ್ತು " ಎಂದು ಉಚ್ಚರಿಸಬೇಕು. ಅನಂತರ ವಟವು;—

" ಮಮಬಾಲ್ಯೇವಯಸ್ಯಜ್ಞಾನತಃ ಸಂಭಾವಿತಾನಾಂ ಜನನೀಸ್ತನ್ಯಪಾನ ಸಹಭೋಜನೋಚ್ಛಿಷ್ಟಭೋಜನ ಸಜಾತೀಯ ವಿಜಾತೀಯ ಸಹಚರಕ್ರೀಡಾಸಲ್ಲಾಪಾನಿಯತಮೂತ್ರೋತ್ಸರ್ಜನ ತತ್ತತ್ಕಾಲಶೌಚಾಭಾವ ಮೌನಾಭಾವ ಪ್ರಭೃತಿ ಸಂಭಾವಿತಾನಾಂ ಪಾಪಾನಾಮಪನೋದನದ್ವಾರಾ ಮಾಂಸಪಿಂಡನಿವೃತ್ತ್ಯೈ ಮಂತ್ರಪಿಂಡೀಕರ್ತುಂ ಶಿವದೀಕ್ಷಯಾ ಮಾಮನುಗೃಹ್ಣಂತು ಭವಂತಃ " ಎಂದು ಪ್ರಾರ್ಥಿಸಬೇಕು. ಗುರುಗಳು " ಅನುಗೃಹ್ಣಾಮಃ " ಎಂದು ಉಚ್ಚರಿಸಬೇಕು.

ಆ ಮೇಲೆ ಯಜಮಾನನು (ವಟುವಿನ ತಂದೆಯು) ಪೂರ್ವದಿನದಲ್ಲಿ ಕ್ಷೀರಾಹಾರಿಯಾಗಿದ್ದು ಉಕ್ತಕಾಲದಲ್ಲಿ ಮಂಗಲಸ್ನಾನವನ್ನು ಮಾಡಿ ಶಿವಚಿನ್ಹಯುಕ್ತನಾಗಿ ಗೋಮಯ ಲೇಪನರಂಗವಲ್ಯಾದಿಗಳಿಂದಲಂಕೃತವಾದ ಭೂಮಿಯಲ್ಲಿ ಭದ್ರಾಸನದ ಮೇಲೆ ಕುಳಿತು ತನ್ನ ಬಲಭಾಗದಲ್ಲಿ ವಟುವನ್ನು ಉತ್ತರ ಮುಖವುಳ್ಳವನನ್ನಾಗಿ ಕುಳ್ಳಿರಿಸಿಕೊಂಡು ಆಚಮನಪೂರ್ವಕ ಪ್ರಾಣಾಯಾಮವನ್ನು * ಮಾಡಿ ಬಲಹಸ್ತದಲ್ಲಿ ಅಕ್ಷತ ಬಿಲ್ವದಲಸಹಿತ ಜಲವನ್ನು ಹಾಕಿಕೊಂಡು ಸಂಕಲ್ಪವನ್ನು ಮಾಡಬೇಕು.--

---

* ಪ್ರಾಣಾಯಾಮ ಲಕ್ಷಣವು= ಅಂಗುಷ್ಠಕನಿಷ್ಠಾನಾಮಿಕಾಂಗುಲಿಗಳಿಂದ ಎರಡೂ ನಾಸಾಪುಟಗಳನ್ನು ಹಿಡಿದು ವಾಮನಾಸಾ ಪುಟದಿಂದ ೧೨ ಮಾತ್ರೆಗಳವರೆಗೆ ವಾಯುವನ್ನು ಮೇಲಕ್ಕೇರಿಸಲಾಗಿ ಪೂರಕವು — ಆ ವಾಯುವನ್ನು ೧೨ ಮಾತ್ರೆಗಳವರೆಗೆ ಪೂರ್ಣ ಕುಂಭದಂತೆ ಚಲಿಸದೆ ಮಸ್ತಕದಲ್ಲಿ ನಿಲ್ಲಿಸಲಾಗಿ ಕುಂಭಕವು — ಪುನಃ ಆ ವಾಯುವನ್ನು ದಕ್ಷಿಣನಾಸಾಪುಟದಿಂದ ೧೨ ಮಾತ್ರೆಗಳವರೆಗೆ ಹೊರಗೆಬಿಡಲಾಗಿ ರೇಚಕವು.—ಈ ಮೂರು ಕೂಡಿ ಒಂದು ಪ್ರಾಣಾಯಾಮವೆನಿಸಿಕೊಳ್ಳುತ್ತದೆ ಮೊಳಕಾಲನ್ನು ಕೈಯಿಂದ ಒಂದು ಸಾರೆ ಸುತ್ತಿಟ್ಟು ಒಂದು ಚುಟಿಗಿ ಹೊಡೆಯುವಷ್ಟು ಕಾಲಕ್ಕೆ ಒಂದು ಮಾತ್ರೆಯೆನ್ನುತ್ತಾರೆ.

## || ಸಂಕಲ್ಪಃ ||

ಓಂ ಅಸ್ಯ ಶ್ರೀಶಂಭೋರಾಜ್ಞಯಾ ಪ್ರವರ್ತಮಾನಸ್ಯಾದ್ಯಬ್ರಹ್ಮಣೋ ದ್ವಿತೀಯಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ವೀರಭದ್ರಾವತಾರೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ಮೇರೋರ್ದಕ್ಷಿಣದಿಗ್ಭಾಗೇ ಶ್ರೀಶೈಲಸ್ಯ ಪಶ್ಚಿಮಪ್ರದೇಶೇ ಕರ್ನಾಟಕದೇಶೇ. ಅಮುಕಸ್ಥಲೇ- ವ್ಯಾವಹಾರಿಕ ಚಾಂದ್ರಮಾನೇ ಶಾಲಿವಾಹನಶಕೇ ಪ್ರಭವಾದಿ ಷಷ್ಟಿಸಂವತ್ಸರಾಣಾಂಮಧ್ಯೇ ಅಮುಕ ಸಂವತ್ಸರೇ- ಅಮುಕಾಯನೇ- ಅಮುಕಮಾಸೇ- ಅಮುಕ ಪಕ್ಷೇ- ಅಮುಕ ವಾರ- ಅಮುಕ ನಕ್ಷತ್ರ- ಅಮುಕಯೋಗ-- ಅಮುಕ ಕರಣ- ಯುಕ್ತಾಯಾಂ ಅಮುಕ ಶುಭತಿಥೌ ಅಮುಕ ಗೋತ್ರೋತ್ಪನ್ನೋಽಹಂ- ಅಸ್ಯ ಕುಮಾರಸ್ಯ ದ್ವಿಜತ್ವ ಸಿದ್ಧ್ಯಾವೇದಾಧ್ಯಯನಾದಿದ್ವಾರಾ ಮೋಕ್ಷಸಿದ್ಧ್ಯರ್ಥಂ ಶಿವದೀಕ್ಷಾಖ್ಯಂ ಕರ್ಮ ಕಾರಯಿಷ್ಯೇ- ತದಂಗ ಗಣೇಶ ಪೂಜನ ಪೂರ್ವಕಂ ಸ್ವಸ್ತಿವಾಚನ- ನಾಂದೀಸಮಾರಾಧನಾಂಕುರಾರ್ಪಣ ಮಂಟಪದೇವತಾ ಪ್ರತಿಷ್ಠಾಶ್ಚ ಕರಿಷ್ಯೇ || ಎಂದು ಸಂಕಲ್ಪವನ್ನು ಮಾಡಿ ಹಸ್ತದಲ್ಲಿರುವ ಜಲಾಕ್ಷತಾದಿಗಳನ್ನು ಒಂದು ಪಾತ್ರೆಯಲ್ಲಿ ಹಾಕಬೇಕು.

## || ಅಥ ಗಣಪತಿಪೂಜಾ ||

ತನ್ನ ಸಮೀಪದ ಒಂದು ಭಾಗದಲ್ಲಿ ಅರ್ಧಶೇರಿನಷ್ಟು ಅಕ್ಕಿಯನ್ನು ಹಾಕಿ ಚೌಕಾಗಿ ಮಾಡಿ ಅದರ ಮೇಲೆ ಅಷ್ಟದಳಕಮಲವನ್ನು ಬರೆದು ಅಲ್ಲಿ ಸುವರ್ಣ ಅಥವಾ ರಜತ ನಿರ್ಮಿತವಾದ ಗಣೇಶ ಮೂರ್ತಿಯನ್ನು ಸ್ಥಾಪಿಸಿ " ಗಣಾನಾಂ ತ್ವಾಗಣಪತಿಗ್‌ಂ ಹವಾಮಹೇ ಕವಿಂ ಕವೀನಾಮುಪಮಶ್ರವಸ್ತಮಂ | ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆನಃ ಶೃಣ್ವನ್ನೂತಿಭಿಃಸೀದಸಾದನಂ || ಓಂ ಭೂಃ ಗಣಪತಿಮಾವಾಹಯಾಮಿ- ಓಂ ಭುವಃ ಗಣಪತಿಮಾವಾಹಯಾಮಿ- ಓಂ ಸ್ವಃ ಗಣಪತಿಮಾವಾಹಯಾಮಿ || ಈ ಪ್ರಕಾರವಾಗಿ ಆಹ್ವಾನಮಾಡಿ- " ತೀವ್ರಾಯೈನಮಃ- ಜ್ವಾಲಿನ್ಯೈನಮಃ- ನಂದಾಯೈನಮಃ- ಭೋಗದಾಯಿನ್ಯೈನಮಃ- ಕಾಮರೂಪಿಣ್ಯೈನಮಃ- ಉಗ್ರಾಯೈನಮಃ- ತೇಜೋವತ್ಯೈನಮಃ- ಸತ್ಯಾಯೈನಮಃ ವಿಘ್ನನಾಶಿನ್ಯೈನಮಃ ,, ಎಂದು ನವಶಕ್ತಿಯರನ್ನು ಧ್ಯಾನಿಸಿ ಓಂನಮೋಭಗವತೇ

ಸಕಲಗುಣಾತ್ಮಕಶಕ್ತಿಯುತಾಯ ಮಹಾಗಣಾಧೀಶ್ವರಾಯ ಯೋಗಪದ್ಮಪೀಠಾತ್ಮನೇ ತುಭ್ಯಂ ಸುವರ್ಣಪೀಠಂ ಕಲ್ಪಯಾಮಿ " ಎಂದು ಸುವರ್ಣಪೀಠವನ್ನು ಕಲ್ಪಿಸಬೇಕು.

" ಸ್ವಾತ್ಮಸಂಸ್ಥಮಜಂಶುದ್ಧಂ ತ್ವಾಮದ್ಯ ಗಣನಾಯಕ |
ಅರಣ್ಯಾಮಿವ ಹವ್ಯಾಶಮೂರ್ತಿಮಾವಾಹಯಾಮ್ಯಹಂ ||

ಓಂ ಭೂರ್ಭುವಃ ಸ್ವರೋಂ | ಸಶಕ್ತಿ ಸಾಂಗ ಸಾಯುಧ ಸವಾಹನ ಸಪರಿವಾರ ಮಹಾಗಣಾಧೀಶ್ವರಾತ್ರಾಗಚ್ಛಾಗಚ್ಛ | ಆವಾಹಯಾಮಿ ಆವಾಹಿತೋಭವ | ಸ್ಥಾಪಯಾಮಿ ಸ್ಥಾಪಿತೋಭವ | ಸನ್ನಿಹಿತೋಭವ | ಸಮ್ಮುಖೋಭವ | ಅವಕುಂಠಿತೋಭವ | ವರದೋಭವ | „ ಎಂದು ಷಣ್ಮುದ್ರೆಗಳನ್ನು * ತೋರಿಸಿ–

" ಏಕದಂತಾಯ ವಿದ್ಮಹೇ ವಕ್ರತುಂಡಾಯ ಧೀಮಹಿ |
ತನ್ನೋ ವಿಘ್ನೇಶ್ವರಃ ಪ್ರಚೋದಯಾತ್ ||

ಗಾಂ ಹೃದಯಾಯ ನಮಃ | ಗೀಂ ಶಿರಸೇ ಸ್ವಾಹಾ | ಗೂಂ ಶಿಖಾಯೈ ವಷಟ್ | ಗೈಂ ಕವಚಾಯ ಹುಂ ಗೌಂ ನೇತ್ರತ್ರಯಾಯ ವೌಷಟ್ | ಗಃ ಅಸ್ತ್ರಾಯ ಫಟ್ || ಎಂದು ಷಡಂಗನ್ಯಾಸವನ್ನು ಮಾಡಿ "ಭೂರ್ಭುವಃ ಸ್ವರೋಂ" ಎಂದು ದಿಗ್ಬಂಧನವನ್ನು ಮಾಡತಕ್ಕದ್ದು.

(ದಶದಿಕ್ಕುಗಳಿಗೆ ಜಲವನ್ನು ಪ್ರೋಕ್ಷಿಸತಕ್ಕದ್ದು.)

---

* ೧ ಆವಾಹಿನೀ ಮುದ್ರೆಯು—ಎರಡು ಹಸ್ತಗಳನ್ನು ಕೂಡಿಸಿ ದೋಣಿಯನ್ನು ಮಾಡಿ ಅನಾಮಿಕಾಬೆರಳುಗಳ ಬುಡದಲ್ಲಿ ಹೆಬ್ಬೆರಳುಗಳನ್ನು ಇಡಬೇಕು.

೨ ಸ್ಥಾಪಿನೀ ಮುದ್ರೆಯು— ಆವಾಹಿನೀ ಮುದ್ರೆಯಿಂದ ಕೂಡಿದ ಹಸ್ತಗಳನ್ನೇ ಅಧೋ ಮುಖವಾಗಿ ಮಾಡಬೇಕು.

೩ ಸನ್ನಿಧಾಪಿನೀ ಮುದ್ರೆಯು—ಎರಡೂ ಹಸ್ತಗಳನ್ನು ಮುಷ್ಟಿಯನ್ನಾಗಿ ಮಾಡಿ ಹೆಬ್ಬೆರಳುಗಳನ್ನು ಮೇಲಕ್ಕೆತ್ತಿ ಒಂದಕ್ಕೊಂದು ಮುಷ್ಟಿಗಳನ್ನು ಕೂಡಿಸಬೇಕು.

೪ ಸಮ್ಮುಖೀಕರಣೀಮುದ್ರೆಯು—ಎರಡೂ ಹಸ್ತಗಳನ್ನು ಮುಷ್ಟಿಗಳನ್ನಾಗಿ ಮಾಡಿ ಆ ಮುಷ್ಟಿಗಳೊಳಗೆ ಹೆಬ್ಬೆರಳುಗಳನ್ನು ಸೇರಿಸಿ ಅವುಗಳನ್ನು ಅಂಗತಾಕಿನಾಗಿ ಮಾಡಬೇಕು.

೫ ಅವಕುಂಠಿನೀ ಮುದ್ರೆಯು—ಬಲಗೈಯನ್ನು ಮುಷ್ಟಿ ಮಾಡಿ ತರ್ಜನಿಯನ್ನು ನೆಟ್ಟಗೆ ನಿಲ್ಲಿಸಿ ಅಧೋ ಮುಖವನ್ನಾಗಿ ಮಾಡಿ ಎಡಗೈಯಲ್ಲಿಟ್ಟು ಸುತ್ತಲು ತಿರುಗಿಸಬೇಕು.

೬ ವರಮುದ್ರೆಯು— ಬಲಹಸ್ತವನ್ನು ವಿಸ್ತರಿಸಿ ಚಾಚಬೇಕು.

॥ಧ್ಯಾನಂ॥ ರಕ್ತೋ ರಕ್ತಾಂಗರಾಗಃ ಶುಕಕುಸುಮಯುತಸ್ತುಂದಿಲಶ್ಚಂದ್ರಮೌಲಿ ।—
ರ್ನೇತ್ರೈರ್ಯುಕ್ತಸ್ತ್ರಿಭಿರ್ವಾಮನಕರಚರಣೋ ಬೀಜಪೂರಾತ್ತವಾಸಾಃ॥
ಹಸ್ತಾಗ್ರಕ್ಲೃಪ್ತಪಾಶಾಂಕುಶಗದವರದೋ ನಾಗವಕ್ತ್ರೋಹಿಭೂಷೋ।
ದೇವಃ ಪದ್ಮಾಸನಸ್ಥೋ ಭವತು ನತಸುರೋ ಭೂತಯೇ ವಿಘ್ನರಾಜಃ ॥

ಈಪ್ರಕಾರವಾಗಿ ಧ್ಯಾನಿಸಿ " ಗಂ ಗಣಪತಯೇನಮಃ ,, ಎಂದು ಜಪವನ್ನು ಮಾಡಿ " ಸುಮುಖಾಯನಮಃ- ಏಕದಂತಾಯನಮಃ- ಕಪಿಲಾಯನಮಃ- ಮಹಾಗಜಕರ್ಣಾಯನಮಃ- ಲಂಬೋದರಾಯನಮಃ- ವಿಕಟಾಯನಮಃ- ವಿಘ್ನರಾಜಾಯನಮಃ- ಗಣಾಧಿಪಾಯನಮಃ- ಫಾಲಚಂದ್ರಾಯನಮಃ- ಗಜಾನನಾಯನಮಃ- ಧೂಮಕೇತವೇನಮಃ- ಸಿದ್ಧಿವಿನಾಯಕಮೂರ್ತಯೇನಮಃ ॥ ಹೀಗೆಂದು ಪುಷ್ಪಗಳನ್ನು ಸಮರ್ಪಿಸಬೇಕು. ಆ ಮೇಲೆ ಷೋಡಶೋಪಚಾರಗಳಿಂದ ಗಣಪತಿಯನ್ನು ಪೂಜಿಸತಕ್ಕದ್ದು. ಅನಂತರ

" ವಕ್ರತುಂಡಮಹಾಕಾಯ ಸೂರ್ಯಕೋಟಿಸಮಪ್ರಭ ।
ನಿರ್ವಿಘ್ನಂ ಕುರು ಮೇ ದೇವ ಸರ್ವಕಾರ್ಯೇಷು ಸರ್ವದಾ ॥
ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪೋದೀಕ್ಷಾಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ಸದಾಶಿವಂ ॥

ಇತಿ ಗಣಪತಿಪೂಜನೇನ ಭಗವಾನ್ ಶ್ರೀಸದಾಶಿವಃ ಪ್ರೀತೋ ಭವತು ॥ ಎಂದು ನಮಸ್ಕರಿಸಬೇಕು. ಇತಿ ಗಣಪತಿಪೂಜಾ ಸಮಾಪ್ತಾ ।

## ॥ ಅಥಸ್ವಸ್ತಿವಾಚನಂ ॥

ಯಜಮಾನನು ರಂಗವಲ್ಯಾದಿಯುಕ್ತಶುದ್ಧಸ್ಥಲದಲ್ಲಿ ದಕ್ಷಿಣೋತ್ತರಭೂಮಿಯನ್ನು ಮುಟ್ಟಿ " ಮಹೀದ್ಯೌಃ ಪೃಥಿವೀಚನ । ಇಮಂ ಯಜ್ಞಂ ಮಿಮಿಕ್ಷತಾಂ । ಪಿಪೃತಾನೋ ಭರೀ[illegible] ಭಿಃ ॥ ಎಂಬ ಮಂತ್ರವನ್ನುಚ್ಚರಿಸಬೇಕು- ಅನಂತರ " [illegible] । [illegible] । ಯ

ಸ್ಮೈ ಕೃಣೋತಿ ಬ್ರಾಹ್ಮಣಸ್ತಗ್‌ಂ ರಾಜನ್ ವಾರಯಾಮಸಿ ॥ ,, ಎಂಬ ಮಂತ್ರವನ್ನುಚ್ಚರಿಸಿ ದಕ್ಷಿಣೋತ್ತರಸ್ಥಾನಗಳಲ್ಲಿ ಅಕ್ಕಿಯನ್ನು ಹಾಕಿ ಅದರಮೇಲೆ

"ಆಕಲಶೇಷು ಧಾವತಿ । ಪವಿತ್ರೇಷು ಪರಿಷಿಚ್ಯತೇ। ಉಕ್ಥೈರ್ಯಜ್ಞೇಷು ವರ್ಧತೇ ,, ಎಂಬ ಮಂತ್ರದಿಂದ ಧಾತುಮಯ ಅಥವಾ ಮೃಣ್ಮಯಗಳಾದ ನೂತನಕಲಶಗಳನ್ನು ಸ್ಥಾಪಿಸಿ ಆ ಕಲಶಗಳಲ್ಲಿ-

"ಇಮಂಮೇ ಗಂಗೇ ಯಮುನೇ ಸರಸ್ವತಿ ಶಿತುದ್ರಿಸ್ತೋಮಗ್‌ಂ ಸಚತಾಪರುಷ್ಣಿಯಾ । ಅಸಿಕ್ನಿಯಾ ಮರುದ್ವೃಧೇ ವಿತಸ್ತಯಾರ್ಜೀಕಿಯೇ ಶೃಣುಹ್ಯಾ ಸುಷೋಮಯಾ ॥ ಎಂಬ ಮಂತ್ರದಿಂದ ತೀರ್ಥೋದಕವನ್ನು ತುಂಬಿ ಅದರಲ್ಲಿ-

"ಗಂಧದ್ವಾರಾಂ ದುರಾಧರ್ಷಾಂ । ನಿತ್ಯಪುಷ್ಟಾಂ ಕರೀಷಿಣೀಂ । ಈಶ್ವರೀಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಂ ॥ ,, ಎಂಬ ಮಂತ್ರದಿಂದ ಗಂಧವನ್ನು ಹಾಕಿ ಆ ಕಲಶಗಳನ್ನು ಪುಷ್ಪಮಾಲಿಕೆಗಳಿಂದಲಂಕರಿಸಿ

"ಸಹಿ ರತ್ನಾನಿ ದಾಶುಷೇ । ಸುವಾಸಿ ಸವಿತಾಭಗಃ । ತಂ ಭಾಗಂ ಚಿತ್ರಮೀಮಹೇ ॥ ಎಂಬ ಮಂತ್ರದಿಂದ ಪಂಚರತ್ನಗಳನ್ನು * ಹಾಕಿ-

"ಪ್ರಸವ್ಯೋಯಜ್ಞೇಸು ದೇವಯಂತೋ ಅರ್ಚಂದ್ಯಾವಾನಗ್‌ಂಹೋಭಿಃ । ಪೃಥಿವಿ ಇಷದ್ಧೈ ಪಿಷಾಂಬ್ರಹ್ಮಾಣ್ಯಸವಾಸಿ ವಿಪ್ರಾ ವಿಷವಗ್ನಿಯಂತಿ ವನಿನೋನ ಶಾಖಾಃ ॥ ಈ ಮಂತ್ರದಿಂದ ಮಾವಿನ ತಳಿರುಗಳನ್ನಿಟ್ಟು

"ಹಿರಣ್ಯವರ್ಣಾಃ ಸಹಿರಣ್ಯ ಸಂದೃಗಪಾಂ ನಪಾತ್ಸೇದುಹಿರಣ್ಯವರ್ಣಃ । ಹಿರಣ್ಯಯಾತ್ಪರಿಯೋನೇರ್ನಿಷದ್ಯಾ ಹಿರಣ್ಯಾಂ ದಾದತ್ಯಂ ನಮಸ್ಮೈ॥ ಈ ಮಂತ್ರದಿಂದ ಹಿರಣ್ಯವನ್ನು ಹಾಕಿ.

"ಯಾಃ ಫಲಿನೀರ್ಯಾ ಅಫಲಾ ಅಪುಷ್ಪಾ ಯಾಶ್ಚ ಪುಷ್ಪಿಣೀಃ । ಬೃಹಸ್ಪತಿಪ್ರಸೂತಾಸ್ತಾನೋ ಮುಂಚತ್ವಗ್‌ಂಹಸಃ ॥ ಈ ಮಂತ್ರದಿಂದ ಕಲಶಗಳ ಮೇಲೆ ನಾರಿಕೇಲ ಫಲಗಳನ್ನಿಟ್ಟು.

---



* ಪಂಚರತ್ನಗಳು=ಮುತ್ತು, ಮಾಣಿಕ ಹವಳ ಇಂದ್ರನೀಲ ವಜ್ರ.

"ಯುವಾ ಸುವಾಸಾಃ ಪರಿವೀತ ಆಗಾತ್ । ಸ ಉ ಶ್ರೇಯಾನ್ ಭವತಿ ಜಾಯಮಾನಃ । ತಂಧೀರಾಸಃ ಕವಯ ಉನ್ನಯಂತಿ । ಸ್ವಾಧ್ಯೋ ಮನಸಾದೇವಯಂತಃ ॥ ಈ ಮಂತ್ರದಿಂದ ಕಲಶಗಳನ್ನು ವಸ್ತ್ರದಿಂದಲಂಕರಿಸಿ-

"ತಂತುಂ ತನ್ವನ್‌ರಜಸೋ ಭಾನುಮನ್ವಿಹಿ । ಜ್ಯೋತಿಷ್ಮತಃ ಪಥೋ ರಕ್ಷಧಿಯಾ ಕೃತಾನ್ । ಅನುಲ್ಬಣಂ ವಯತ ಜೋಗುವಾಮಪೋ ಮನುರ್ಭವ ಜನಯಾ ದೈವ್ಯಂಜನಂ ॥ ಈಮಂತ್ರದಿಂದ ಕಲಶಗಳಿಗೆ ಸೂತ್ರಗಳನ್ನು ಹಾಕಿ ಉತ್ತರ ಕಲಶದಲ್ಲಿ ದೇವತೆಗಳನ್ನು ಆಹ್ವಾನಮಾಡಬೇಕು.

ತತ್ವಾಯಾಮೀತಿ ಮಂತ್ರಸ್ಯ ಶುನಃಶೇಫಋಷಿಃ । ವರುಣೋದೇವತಾ । ತ್ರಿಷ್ಟುಪ್ ಛಂದಃ । ಉತ್ತರಕಲಶೇ ವರುಣಾವಾಹನೇವಿನಿಯೋಗಃ ॥ "ತತ್ವಾಯಾಮಿ ಬ್ರಹ್ಮಣಾ ವಂದಮಾನಸ್ತದಾಶಾಸ್ತೇ ಯಜಮಾನೋ ಹವಿರ್ಭಿಃ । ಅಹೇಡಮಾನೋ ವರುಣೇಹಬೋಧ್ಯುರುಶಗ್ಂ ಸಮಾನ ಆಯುಃ ಪ್ರಮೋಷೀಃ ॥ ಎಂಬ ಮಂತ್ರದಿಂದ ವರುಣನನ್ನು ಆಹ್ವಾನಮಾಡಿ.

" ಕಲಶಸ್ಯ ಮುಖೇರುದ್ರಃ ಕಂಠೇ ವಿಷ್ಣುಃ ಸಮಾಶ್ರಿತಃ ।<br>
ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ ।<br>
ಕುಕ್ಷೌತು ಸಾಗರಾಃ ಸರ್ವೇ ಸಪ್ತದ್ವೀಪಾ ವಸುಂಧರಾ ।<br>
ಋಗ್ವೇದೋಽಥ ಯಜುರ್ವೇದಃ ಸಾಮವೇದೋಽಸ್ಯಥರ್ವಣಃ ॥<br>
ಅಂಗೈಶ್ಚ ಸಹಿತಾಃ ಸರ್ವೇ ಕಲಶಂ ತು ಸಮಾಶ್ರಿತಾಃ ॥<br>
ಗಾಯತ್ರೀ ಚೈವ ಸಾವಿತ್ರೀ ಶಾಂತಿಃ ಪುಷ್ಟಿಕರೀ ತಥಾ ।<br>
ಆಯಾಂತು ಮಮ ಶಾಂತ್ಯರ್ಥಂ ದುರಿತಕ್ಷಯ ಕಾರಕಾಃ ॥

ಎಂಬೀಮಂತ್ರಗಳಿಂದ ಉತ್ತರ ಕಲಶವನ್ನು ಮುಟ್ಟಿ ದೇವತೆಗಳನ್ನು ಆಹ್ವಾನಮಾಡಿ ಆ ಕಲಶವನ್ನು ಷೋಡಶೋಪಚಾರಗಳಿಂದ ಪೂಜಿಸಬೇಕು. ಆಮೇಲೆ

ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥ-ಸಾಧಕೇ ।<br>
ಶರಣ್ಯೇ ತ್ರ್ಯಂಬಕೇ ದೇವಿ ನಾರಾಯಣಿ ನಮೋಽಸ್ತುತೇ ॥

ತದೇವ ಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ ।
ವಿದ್ಯಾಬಲಂ ದೈವಬಲಂ ತದೇವ ಗೌರೀಪತೇ ತೇಽಂಘ್ರಿಯುಗಂ ಸ್ಮರಾಮಿ ॥
ಎಂದು ಇಷ್ಟದೇವತೆಗಳನ್ನು ನಮಸ್ಕರಿಸಿ "ಮಾತ್ರೇನಮಃ ಪಿತ್ರೇನಮಃ ॥

ಆಚಾರ್ಯೇಭ್ಯೋನಮಃ ।
ಸರ್ವೇಭ್ಯೋ ಮಾಹೇಶ್ವರೇಭ್ಯೋ ನಮಃ ॥

ಎಂದು ಮಾತ್ರಾದಿ ದೇವತೆಗಳನ್ನು ನಮಸ್ಕರಿಸಿ ಕಲಶಗಳ ಮೇಲೆ ಅಕ್ಷತಾರೋಪಣವನ್ನು ಮಾಡಬೇಕು. ।

ಅನಂತರ ಯಜಮಾನನು ಆಚಮನ ಪ್ರಾಣಾಯಾಮಗಳನ್ನು ಮಾಡಿ ದೇಶ ಕಾಲಗಳನ್ನು ಸಂಕೀರ್ತಿಸಿ " ದೀಕ್ಷಾಕರ್ಮ ಕರ್ತುಮಾದೌ ಶುದ್ಧಿವೃದ್ಧ್ಯಭ್ಯುದಯ ಸಿದ್ಧಿದ್ವಾರಾ ಶ್ರೀಪರಮೇಶ್ವರ ಪ್ರೀತ್ಯರ್ಥಂ ಸ್ವಾಧ್ಯಾಯವ್ರತಾದಿ ವಿಶಿಷ್ಟೈಶ್ಚತುರ್ಭಿರ್ಮಾಹೇಶ್ವರೈಃ ಸಹ ಸ್ವಸ್ತಿಪುಣ್ಯಾಹವಾಚನಂ ಕರಿಷ್ಯೇ ,, ಎಂದು ಸಂಕಲ್ಪವನ್ನು ಮಾಡಿ ಕುಶಲರಾದ ಧರ್ಭೆಯ ಉಂಗುರಗಳಂ ಧರಿಸಿದ ಪವಿತ್ರಮತಸ್ಥಲೋತ್ಪನ್ನರಾದ ನಾಲ್ಕು ಜನ ಮಾಹೇಶ್ವರರನ್ನು ಆ ಕಲಶಗಳ ಹಿಂಭಾಗದಲ್ಲಿ ಇಬ್ಬಿಬ್ಬರಂತೆ ಪೂರ್ವಾಭಿಮುಖವುಳ್ಳವರನ್ನಾಗಿ ಕೂಡ್ರಿಸಿ ಅವರನ್ನು ಗಂಧಪುಷ್ಪಾದಿಗಳಿಂದ ಪೂಜಿಸಿ ತಾಂಬೂಲ ದಕ್ಷಿಣಾದಿಗಳನ್ನು ಸಮರ್ಪಿಸಿ ನಮಸ್ಕರಿಸಬೇಕು. ಅನಂತರ ಯಾವತ್ತು ಮಾಹೇಶ್ವರರು ಪೂರ್ವಾಭಿಮುಖರಾಗಿ ಎದ್ದು ನಿಲ್ಲಬೇಕು. ಯಜಮಾನನು ಅವರ ಬಲಭಾಗದಲ್ಲಿ ಉತ್ತರಾಭಿಮುಖನಾಗಿ ಹಸ್ತಗಳಲ್ಲಿ ಉತ್ತರ ಕಲಶವನ್ನು ಹಿಡಿದುಕೊಂಡು ಎದ್ದುನಿಂತು ಆ ಕಲಶವನ್ನು ಮುಖದವರೆಗೆ ತಂದು ಮಾಹೇಶ್ವರರೊಡನೆ ಪುಣ್ಯಾಹವಾಕ್ಯಗಳನ್ನು ಉಚ್ಚರಿಸಬೇಕು.

| ಯಜಮಾನನ ವಚನಗಳು. | ಮಾಹೇಶ್ವರರ ವಚನಗಳು. |
| --- | --- |
| ಆಪಃ | ಶಿವಾಆಪಃಸಂತು. |
| ಗಂಧಾಃ | ಸುಗಂಧಾಃಪಾಂತು. |
| ಸುಮನಸಃ | ಸೌಮನಸ್ಯಮಸ್ತು. |
| ಅಕ್ಷತಾಃ | ಅಕ್ಷತಂಚಾರಿಷ್ಟಂಚಾಸ್ತು. |
| ತಾಂಬೂಲಾನಿಪಾಂತು | ಐಶ್ವರ್ಯಮಸ್ತು. |
| ದಕ್ಷಿಣಾಃಪಾಂತು | ಬಹುದೇಯಂಚಾಸ್ತು. |

ಈ ಪ್ರಕಾರವಾಗಿ ಪರಸ್ಪರ ವಾಕ್ಯಗಳನ್ನುಚ್ಚರಿಸಿದ ಮೇಲೆ ಯಜಮಾನನು ಕಲಶವನ್ನು ಮೊದಲಿದ್ದ ಸ್ಥಾನದಲ್ಲಿಟ್ಟು ಉತ್ತರಾಭಿಮುಖನಾಗಿ, ಬಲಮೊಳಕಾಲನ್ನು, ಭೂಮಿಯಮೇಲಿಟ್ಟು

"ಶ್ರದ್ಧಯಾಗ್ನಿಃಸಮಿಧ್ಯತೇ ಶ್ರದ್ಧಯಾಪೂಯತೇಹವಿಃ । ಶ್ರದ್ಧಾಂ ಭಗಸ್ಯ ಮೂರ್ಧನಿ ವಚಸಾ ವೇದಯಾಮಸಿ । ಪ್ರಿಯಗ್‍ಂಶ್ರದ್ಧೇ ದದತಃ ಪ್ರಿಯಗ್‍ಂಶ್ರದ್ಧೇ ದಿದಾಸತಃ । ಪ್ರಿಯಂ ಭೋಜ್ಯೇಷು ಯಜ್ವಸು ಇದಂ ಮ ಉದಿತಂ ಕೃಧಿ । ಶ್ರದ್ಧಾಗ್‍ಂ ದೇವಾ ಯಜಮಾನಾ ವಾಯುಗೋಪಾಮುಪಾಸತೇ ॥

ಈ ಮಂತ್ರವನ್ನುಚ್ಚರಿಸಿ ಪುನಃ ಆ ಕಲಶವನ್ನು ಹಸ್ತಗಳಲ್ಲಿ ತೆಗೆದುಕೊಂಡು ಉತ್ತರಾಭಿಮುಖನಾಗಿ ಎದ್ದುನಿಂತು—

| ಯಜಮಾನನ ವಾಕ್ಯಗಳು. | ಮಾಹೇಶ್ವರರ ವಾಕ್ಯಗಳು. |
| --- | --- |
| ಮನಃಸಮಾಧೀಯತಾಂ । | ಸಮಾಹಿತಮನಸಃಸ್ಮಃ । |
| ಪ್ರಸೀದಂತುಭವಂತಃ । | ಪ್ರಸನ್ನಾಃಸ್ಮಃ । |

ಈ ಪ್ರಕಾರವಾಗಿ ಪರಸ್ಪರ ವಾಕ್ಯಗಳನ್ನುಚ್ಚರಿಸಿದಮೇಲೆ, ಸರ್ವಮಾಹೇಶ್ವರರೊಡನೆ— ಶಾಂತಿರಸ್ತು, ಪುಷ್ಟಿರಸ್ತು, ತುಷ್ಟಿರಸ್ತು, ವೃದ್ಧಿರಸ್ತು, ಅವಿಘ್ನಮಸ್ತು,

ಶಯುಷ್ಯಮಸ್ತು, ಆರೋಗ್ಯಮಸ್ತು, ಸ್ವಸ್ತಿಶಿವಂಕರ್ಮಾಸ್ತು, ಕರ್ಮಸಮೃದ್ಧಿರಸ್ತು. ಧರ್ಮಸಮೃದ್ಧಿರಸ್ತು, ಪುತ್ರಸಮೃದ್ಧಿರಸ್ತು, ವೇದಸಮೃದ್ಧಿರಸ್ತು, ಶಾಸ್ತ್ರಸಮೃದ್ಧಿರಸ್ತು, ಧನಧಾನ್ಯಸಮುದ್ಧಿರಸ್ತು, ಇಷ್ಟಸಂಪದಸ್ತು, ಈ ಪ್ರಕಾರವಾಗಿ ೧೫ ವಾಕ್ಯಗಳನ್ನುಚ್ಚರಿಸಬೇಕು ಅನಂತರ—

| ಯಜಮಾನನ ವಾಕ್ಯಗಳು. | ಮಾಹೇಶ್ವರರ ವಾಕ್ಯಗಳು. |
|---|---|
| ಕರ್ಮದೇವತಾತ್ಮಕೋ ಭಗವಾನ್ ಶಿವಃ ಪ್ರೀಯತಾಂ \| | ಪ್ರೀಯತಾಂ ಭಗವಾನ್ ಕರ್ಮದೇವತಾತ್ಮಕಃ ಶಿವಃ \| |
| ಪುಣ್ಯಾಹಂವಾಚಯಿಷ್ಯೇಽಹಂ \| | ವಾಚ್ಯತಾಂ \| |

ಈ ಪ್ರಕಾರವಾಗಿ, ವಾಕ್ಯಗಳನ್ನುಚ್ಚರಿಸಿದಮೇಲೆ, ಸಕಲಮಾಹೇಶ್ವರರೊಡನೆ.

“ ಉದ್ಗಾತೇವ ಶಕುನೇ ಸಾಮಗಾಯಸಿ ಬ್ರಹ್ಮಪುತ್ರಇವ ಸವನೇಷು ಶಗಂಸಸಿ, ಋಷೇವಾಜೀಶಿಶುಮತೀ ರಪೀತ್ಯಾ ಸರ್ವತೋ ನಃ ಶಕುನೇ ಭದ್ರಮಾವದ । ವಿಶ್ವತೋ ನಃ ಶಕುನೇ ಪುಣ್ಯಮಾವದ ॥

ಈ ಮಂತ್ರವನ್ನು ಪಠಿಸಬೇಕು. ಆಮೇಲೆ—

| ಯಜಮಾನನ ವಾಕ್ಯಗಳು | ಮಾಹೇಶ್ವರರ ವಾಕ್ಯಗಳು. |
|---|---|
| (ಮಂದ್ರಸ್ವರದಿಂದ) | (ಮಂದ್ರಸ್ವರದಿಂದ) |
| ಓಂ ಪುಣ್ಯಾಹಂ ಭವಂತೋ ಬ್ರುವಂತು \| | ಓಂ ಪುಣ್ಯಾಹಂ \| |
| (ಮಧ್ಯಸ್ವರದಿಂದ) | (ಮಧ್ಯಸ್ವರದಿಂದ) |
| ಓಂ ಪುಣ್ಯಾಹಂ ಭವಂತೋ ಬ್ರುವಂತು \| | ಓಂ ಪುಣ್ಯಾಹಂ \| |
| (ಉನ್ನತ ಸ್ವರದಿಂದ) | (ಉನ್ನತಸ್ವರದಿಂದ) |
| ಓಂ ಪುಣ್ಯಾಹಂ ಭವಂತೋ ಬ್ರುವಂತು \| | ಓಂ ಪುಣ್ಯಾಹಂ \| |

ಈಪ್ರಕಾರ ಸ್ವರಾನುಗುಣವಾಗಿ ಉಚ್ಚರಿಸಿದಮೇಲೆ ಮಾಹೇಶ್ವರರೊಡನೆ —

" ಸ್ವಸ್ತಿನ ಇಂದ್ರೋ ವೃದ್ಧಶ್ರವಾಃ ಸ್ವಸ್ತಿನಃ ಪೂಷಾ ವಿಶ್ವವೇದಾಃ | ಸ್ವಸ್ತಿ ನಸ್ತಾರ್ಕ್ಷ್ಯೋ ಅರಿಷ್ಟನೇಮಿಃ ಸ್ವಸ್ತಿನೋ ಬೃಹಸ್ಪತಿರ್ದಧಾತು ॥

ಈಮಂತ್ರವನ್ನು ಪಠಿಸಬೇಕು. ಆಮೇಲೆ

| ಯಜಮಾನನ ವಾಕ್ಯ. | ಮಾಹೇಶ್ವರರ ವಾಕ್ಯ. |
|---|---|
| ಓಂ ಸ್ವಸ್ತಿ ದೀಕ್ಷಾಕರ್ಮಣೇ ಭವಂತೋ ಬ್ರುವಂತು | | ದೀಕ್ಷಾಕರ್ಮಣೇ ಸ್ವಸ್ತಿ | |

ಈಪ್ರಕಾರ ವಾಕ್ಯವನ್ನು ಮೊದಲಿನಂತೆ ಮೂರುಸಾರೆ ಮಂದ್ರಮಧ್ಯೋನ್ನತ ಸ್ವರಗಳಿಂದ ಪರಸ್ಪರವಾಗಿ ಉಚ್ಚರಿಸಬೇಕು. ಅನಂತರ ಯಜಮಾನನು—

" ಋದ್ಧ್ಯಾಮಸ್ತೋಮಗ್ಂ ಸನುಯಾಮವಾಜಮಾನೋ ಮಂತ್ರಗ್ಂ ಸರಥೇಹೋಪಯಾತಂ । ಯಶೋವಪಕ್ವಂಮಧುಗೋಷ್ವಂತರಾಭೂತಾಂ ಶೋ ಅಶ್ವಿನೋಃ ಕಾಮಮಪ್ರಾಃ ॥

ಈಮಂತ್ರವನ್ನು ಪಠಿಸಬೇಕು. ಆಮೇಲೆ -

| ಯಜಮಾನನ ವಾಕ್ಯ | ಮಾಹೇಶ್ವರರ ವಾಕ್ಯ. |
|---|---|
| ಋದ್ಧಿಂ ಭವಂತೋ ಬ್ರುವಂತು | | ಋಧ್ಯತಾಂ | |

ಈ ಪ್ರಕಾರವಾಗಿ ಮೊದಲಿನಂತೆ ಮೂರುಸ್ವರಗಳಿಂದ ವಾಕ್ಯವನ್ನುಚ್ಚರಿಸಿದ ಬಳಿಕ ಯಜಮಾನನು ತನ್ನ ಹಸ್ತದಲ್ಲಿರತಕ್ಕ ಕಲಶವನ್ನು ಮೊದಲಿದ್ದಸ್ಥಾನದಲ್ಲಿಟ್ಟು ವಟುಸಹಿತನಾಗಿ ಪೂರ್ವಾಭಿಮುಖನಾಗಿ ಕುಳಿತುಕೊಳ್ಳಬೇಕು. ಮಾಹೇಶ್ವರರು ಕೂಡ ಪೂರ್ವಾಭಿಮುಖರಾಗಿ ಕುಳಿತುಕೊಂಡು ಉತ್ತರಕಲಶವನ್ನು ಬಲಹಸ್ತದಲ್ಲಿಯೂ ದಕ್ಷಿಣಕಲಶವನ್ನು ವಾಮಹಸ್ತದಲ್ಲಿಯೂ ಹಿಡಿದು ಒಂದು ವಿಶಾಲವಾದಪಾತ್ರೆಯಲ್ಲಿ ಅವುಗಳ ಉದಕವನ್ನು ಹಾಕುತ್ತ

" ಓಷಧಾನಿ ಚ ರತ್ನಾನಿ ಕಾಲಶಸ್ಯಾವಯವಾಶ್ಚಯೇ । ಸರಿತಃ ಸಾಗರಾಃ ಶೈಲಾಸ್ತೀರ್ಥಾನಿ ಚ ಹ್ರದಾನವಾಃ ॥ ಏತೇ ತ್ವಾಮಭಿಷಿಂಚಂತು ಸರ್ವಕಾಮಾರ್ಥಸಿದ್ಧಯೇ ॥

ಎಂಬ ಮಂತ್ರದೊಡನೆ " ಶಾಂತಿಃ ಪುಷ್ಟಿಸ್ತುಷ್ಟಿಶ್ಚಾಸ್ತು ಶಿವಮಸ್ತು ಭಗವಾನ್ ಶಿವಃ ಪ್ರೀಯತಾಂ ॥ ಎಂಬ ವಾಕ್ಯಗಳನ್ನುಚ್ಚರಿಸುತ್ತ ಜಲವನ್ನು ಎರೆಯಬೇಕು.

ಆಮೇಲೆ ಮಾಹೇಶ್ವರರು ಯಜಮಾನನನ್ನೂ ಹಾಗೂ ವಟುವನ್ನೂ ತಮ್ಮ ಎದುರಿಗೆ ಕುಳ್ಳಿರಿಸಿಕೊಂಡು ಆಪಾತ್ರೆಯಲ್ಲಿರೆದ ಪವಿತ್ರಜಲವನ್ನು ಪಲ್ಲವಗಳಿಂದ ಸ್ಪರ್ಶಿಸುತ್ತ-

" ಓಂ ತತ್ಸವಿತುರ್ವರೇಣ್ಯಂ ವಿಶ್ವಾಮಿತ್ರಃ ಸವಿತಾ ಗಾಯತ್ರೀ । ಆಪೋಹಿಷ್ಠೇತಿ ನವರ್ಚಸ್ಯಾಂಬರೀಷಃ । ಸಿಂಧುದ್ವೀಪ ಆಪೋ ಗಾಯತ್ರೀ । ಪಂಚಮೀ ವರ್ಧಮಾನಾ ಸಪ್ತಮೀ ಪ್ರತಿಷ್ಠೇಂತ್ಯೇ ದ್ವೇ ಅನುಷ್ಟುಭೌ । ಆಪೋಹಿಷ್ಠಾಮಯೋ ಭುವಸ್ತಾನ ಊರ್ಜೇ ದಧಾತನ । ಮಹೇರಣಾಯ ಚಕ್ಷಸೇ । ಯೋ ವಃ ಶಿವತಮೋ ರಸಸ್ತಸ್ಯ ಭಾಜಯತೇ ಹನಃ । ಉಶತೀರಿವ ಮಾತರಃ । ತಸ್ಮಾ ಅರಂಗಮಾಮವೋ ಯಸ್ಯ ಕ್ಷಯಾಯ ಜಿನ್ವಥ । ಆಪೋ ಜನಯಥಾ ಚನಃ ॥ ಶಂ ನೋ ದೇವೀರಭೀಷ್ಟಯ ಆಪೋ ಭವಂತು ಪೀತಯೇ । ಶಂ ಯೋರಭಿಸ್ರವಂತು ನಃ । ದೇವಸ್ಯ ತ್ವಾ ಸವಿತುಃ ಪ್ರಸವೇಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಮಶ್ವಿನೋರ್ಭೈಷಜ್ಯೇನ ತೇಜಸೇ ಬ್ರಹ್ಮವರ್ಚಸಾಯಾಭಿಷಿಂಚಾಮಿ । ದೇವಸ್ಯ ತ್ವಾ ಸವಿತುಃ ಪ್ರಸವೇಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಂ ಸರಸ್ವತ್ಯೈ ಭೈಷಜ್ಯೇನ ವೀರ್ಯಾಯಾನ್ನಾದ್ಯಾಯಾಭಿಷಿಂಚಾಮಿ । ದೇವಸ್ಯ ತ್ವಾ ಸವಿತುಃ ಪ್ರಸವೇಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಂ । ಇಂದ್ರಸ್ಯೇಂದ್ರಿಯೇಣ ಶ್ರಿಯೈ ಯಶಸೇ ಬಲಾಯಾಭಿಷಿಂಚಾಮಿ । ಅಮೃತಾಭಿಷೇಕೋಸ್ತು ॥ ಈಮಂತ್ರಗಳಿಂದ ಮಸ್ತಕದಲ್ಲಿ ಪ್ರೋಕ್ಷಿಸತಕ್ಕದ್ದು ಅನಂತರ ಮುತ್ತೈದೆಯರು ಯಜಮಾನನಿಗೂ ವಟುವಿಗೂ ಆರತಿಯನ್ನು ಬೆಳಗಬೇಕು. ಆಮೇಲೆ

"ಯೋವೈತಾಂ ಬ್ರಹ್ಮಣೋ ವೇದ ಅಮೃತೇನಾವೃತಾಂ ಪುರೀಂ । ತಸ್ಮೈ
ಬ್ರಹ್ಮ ಚ ಬ್ರಹ್ಮಾ ಚ ಆಯುಃ ಕೀರ್ತಿಂ ಪ್ರಜಾಂ ದದುಃ ॥

ಎಂಬೀ ವೈದಿಕಮಂತ್ರದಿಂದ ಮಾಹೇಶ್ವರರು ಯಜಮಾನನಿಗೆ ಮಂತ್ರಾ
ಕ್ಷತೆಗಳನ್ನು ಆಶೀರ್ವದಿಸಬೇಕು. ಯಜಮಾನನು ಅವುಗಳನ್ನು ಮಸ್ತಕದ ಮೇಲೆ
ಧರಿಸಿಕೊಳ್ಳಬೇಕು. ॥ ಇತಿಸ್ವಸ್ತಿವಾಚನಂ ॥ ॥

## ॥ ಅಥನಾಂದೀಸಮಾರಾಧನಂ ॥

ಯಜಮಾನನು ಅಕ್ಕಿಯಿಂದತುಂಬಿದಪಾತ್ರೆಯಲ್ಲಿ ಒಂದು ನಾರಿಕೇಲಫಲ
ವನ್ನೂ ಹಾಗೂ ೨೪ ಜನಮಾಹೇಶ್ವರಾರಾಧನಪರಿಮಿತವಾದದ್ರವ್ಯವನ್ನೂ ಇಟ್ಟು
ದೇಶಕಾಲಗಳನ್ನು ಸಂಕೀರ್ತಿಸಿ " ಅಸ್ಯಾಂಶುಭತಿಥೌ ದೀಕ್ಷಾಂಗಭೂತನಾಂದೀ
ಶೋಭನದೇವತಾಪ್ರೀತ್ಯರ್ಥಂ ನಾಂದೀಸಮಾರಾಧನಮಹಂ ಕರಿಷ್ಯೇ „ ಎಂದು ಸಂ
ಕಲ್ಪವಂ ಮಾಡಿ ॥ ಶ್ರೀನಂದಿ ಭೃಂಗಿ ರಿಟ ವೀರಕ ವೀರಭದ್ರ ವೃಷಭ ಷ
ಣ್ಮುಖ ಗಜಮುಖ ಗೋಮುಖ ದಶಮುಖ ಶತಮುಖ ಸಹಸ್ರಮುಖ ರೇಣು
ಕ ದಾರುಕ ಘಂಟಾಕರ್ಣ ಧೇನುಕರ್ಣ ವಿಶ್ವಕರ್ಣ ವೀರಕರ್ಣ ವಿಜಯಕರ್ಣ
ರೇಣುಕರ್ಣ ಪುಷ್ಪದಂತ ರುಂಡಾಭರಣ ದಂಡಪಾಣಿ ಚಂಡೇಶ್ವರಪ್ರಮುಖಪ್ರಮ
ಥಗಣಾಧೀಶ್ವರಾನತ್ರಾವಾಹಯಾಮಿ ॥ಭೋ ನಂದ್ಯಾದಿಮಹಾಗಣಾಃ ಸಾಯುಧಾಃ
ಸಪರಿವಾರಾಃ ಸಮಾಗತ್ಯಾತ್ರ ಮದೀಯಾಂ ಪೂಜಾಂ ಭವಂತೋ ಗೃಹ್ಣಂತು ॥
ಈಪ್ರಕಾರ ಆಹ್ವಾನಪೂರ್ವಕವಾಗಿ ಪ್ರಾರ್ಥಿಸಿ ಆ ದ್ರವ್ಯವನ್ನು ಅಷ್ಟವಿಧೋಪ
ಚಾರದಿಂದ ಪೂಜಿಸಿ

ಹಿರಣ್ಯಗರ್ಭಗರ್ಭಸ್ಥಂ ಹೇಮಬೀಜಂ ವಿಭಾವಸೋಃ ।
ಅನಂತಪುಣ್ಯಫಲದಮತಃ ಶಾಂತಿಂ ಪ್ರಯಚ್ಛ ಮೇ ॥

ಅನೇನ ಹಿರಣ್ಯೇನ ನಾಂದೀಶೋಭನದೇವತಾಃ ಪ್ರಿಯಂತಾಂ। ಎಂದು ೨೪ ಜನ
ಮಾಹೇಶ್ವರರಿಗೆ ಆಪಾತ್ರೆಯಲ್ಲಿರತಕ್ಕದ್ರವ್ಯವನ್ನು ದಾನಮಾಡಬೇಕು, ಆಮೇಲೆ ಸಮಸ್ತ
ಮಾಹೇಶ್ವರರಿಗೆಭೋಜನವನ್ನು ಮಾಡಿಸಬೇಕು, ಇತಿ ನಾಂದೀವಿಧಾನಂ ಸಮಾಪ್ತಂ

## ॥ ಅಥಾಂಕುರಾರ್ಪಣಂ ॥

ಯಜಮಾನನು ಪ್ರಾಣಾಯಾಮವನ್ನು ಮಾಡಿ ದೇಶಕಾಲಗಳನ್ನು ಕೀರ್ತಿಸಿ "ಅಸ್ಯಾಂ ಶುಭತಿಥೌ ದೀಕ್ಷಾಕರ್ಮಸಾಫಲ್ಯನಿರಂತರಶುಭತ್ವಸಿದ್ಧಿದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಮಂಕುರಾರ್ಪಣಮಹಂ ಕರಿಷ್ಯೇ " ಎಂದು ಸಂಕಲ್ಪವಂ ಮಾಡಿ ಗೋಮಯದಿಂದ ಸಾರಿಸಿದಭೂಮಿಯನ್ನು ರಂಗವಲ್ಲಿಯಿಂದಲಂಕರಿಸಿ ಅಲ್ಲಿ ಅಕ್ಕಿಯನ್ನುಹಾಕಿ ಕರಿಕೆ ಅರಳಿ ಶಿರೀಷ ಬಿಲ್ವಪತ್ರಗಳನ್ನುಹರವಿ ಅದರಮೇಲೆ ಪಂಚಸೂತ್ರಗಳಿಂದಸುತ್ತಿದ ಒಂದು ನೂತನಬಿದುರುಪುಟ್ಟಿಯನ್ನುಸ್ಥಾಪಿಸಿ ಅದರಲ್ಲಿ

" ಮೃತ್ತಿಕೇಹನ ಮೇ ಪಾಪಂ ಯನ್ಮಯಾ ದುಷ್ಕೃತಂ ಕೃತಂ ।
ಮೃತ್ತಿಕೇ ಬ್ರಹ್ಮದತ್ತಾಸಿ ಕಾಶ್ಯಪೇನಾಭಿಮಂತ್ರಿತೇ ॥
ಮೃತ್ತಿಕೇ ದೇಹಿ ಮೇ ಪುಷ್ಟಿಂ ತ್ವಯಿ ಸರ್ವಂ ಪ್ರತಿಷ್ಠಿತಂ ।
ತ್ವಯಾ ಹತೇನ ಪಾಪೇನ ಗಚ್ಛಾಮಿ ಪರಮಾಂ ಗತಿಂ ॥

" ಎಂಬ ಮಂತ್ರದಿಂದಹುತ್ತದಮಣ್ಣನ್ನೂ ಮಡುವಿನಕೆಸರನ್ನೂ ಹಾಗೂ ಆಕಳ ಕುಳ್ಳಿನಪುಡಿಯನ್ನೂ ಮಿಶ್ರಮಾಡಿ ಹಾಕಬೇಕು. ಅನಂತರ ಅದರ ಮೇಲೆ ಬಿಳಿ, ಕೆಂಪು, ಹಳದಿ, ಹಸರುಮೊದಲಾದ ಬಣ್ಣಗಳಿಂದಕೂಡಿದಪುಷ್ಪಗಳನ್ನುಹರವಿ ಆಪಾತ್ರೆಯಮಧ್ಯ, ಪೂರ್ವ, ದಕ್ಷಿಣ, ಪಶ್ಚಿಮ ಉತ್ತರಸ್ಥಾನದಲ್ಲಿ ಅನುಕ್ರಮದಿಂದ "ಓಂ ಹ್ರೌಂ ಯಂ ಈಶಾನಾಯ ನಮಃ ,, ಎಂದು ಈಶಾನಮೂರ್ತಿಯನ್ನು, " ಓಂ ಹ್ರಾಂ ವಂ ಸದ್ಯೋಜಾತಾಯನಮಃ ,, ಎಂದು ಸದ್ಯೋಜಾತಮೂರ್ತಿಯನ್ನೂ, " ಓಂ ಹ್ರಿಂ ಮಂ ವಾಮದೇವಾಯ ನಮಃ " ಎಂದು ವಾಮದೇವಮೂರ್ತಿಯನ್ನೂ, ಓಂ ಹ್ರೂಂ ಶಿಂ ಅಘೋರಾಯನಮಃ " ಎಂದುಅಘೋರಮೂರ್ತಿಯನ್ನೂ, " ಓಂ ಹ್ರೈಂವಾಂತತ್ಪುರುಷಾಯನಮಃ " ಎಂದು ತತ್ಪುರುಷಮೂರ್ತಿಯನ್ನೂ, ಆಹ್ವಾನಮಾಡಿ ಆ ಪಂಚಮೂರ್ತಿಗಳನ್ನು ಷೋಡಶೋಪಚಾರಗಳಿಂದ ಪೂಜಿಸಬೇಕು. ಆಮೇಲೆ ನೆಲ್ಲು ಹೆಸರು, ಕಡಲೆ, ಎಳ್ಳು, ಗೋಧಿ, ಈ ಪಂಚಧಾನ್ಯಗಳನ್ನು ಜಲದಿಂದ ತೊಳೆದು

"ಈಶಾನಃ ಸರ್ವವಿದ್ಯಾನಾಮೀಶ್ವರಃ ಸರ್ವಭೂತಾನಾಂ ಬ್ರಹ್ಮಾಧಿಪತಿರ್ಬ್ರಹ್ಮಣೋಽಧಿಪತಿರ್ಬ್ರಹ್ಮಾ ಶಿವೋ ಮೇ ಅಸ್ತು ॥ ಸದಾಶಿವೋಂ ॥

ಎಂಬಮಂತ್ರದಿಂದ ಮಧ್ಯಸ್ಥಾನದಲ್ಲಿ ನೆಲ್ಲನ್ನೂ--

"ಸದ್ಯೋಜಾತಂ ಪ್ರಪದ್ಯಾಮಿ ಸದ್ಯೋಜಾತಾಯ ವೈ ನಮಃ । ಭವೇ ಭವೇ ನಾತಿಭವೇ ಭವಸ್ವ ಮಾಂಭವೋದ್ಭವಾಯ ನಮಃ ॥

ಈಮಂತ್ರದಿಂದ ಪೂರ್ವದಿಕ್ಕಿನಲ್ಲಿ ಹೆಸರನ್ನೂ--

"ವಾಮದೇವಾಯ ನಮೋ ಜ್ಯೇಷ್ಠಾಯ ನಮಃ ಶ್ರೇಷ್ಠಾಯ ನಮೋ ರುದ್ರಾಯ ನಮಃ ಕಾಲಾಯ ನಮಃ ಕಲವಿಕರಣಾಯ ನಮೋ ಬಲವಿಕರಣಾಯ ನಮೋ ಬಲಾಯ ನಮೋ ಬಲಪ್ರಮಥನಾಯ ನಮಃ ಸರ್ವಭೂತದಮನಾಯ ನಮೋ ಮನೋನ್ಮನಾಯ ನಮಃ ॥

ಈಮಂತ್ರದಿಂದ ದಕ್ಷಿಣದಿಕ್ಕಿನಲ್ಲಿ ಕಡಲೆಯನ್ನೂ--

"ಅಘೋರೇಭ್ಯೋಥ ಘೋರೇಭ್ಯೋ ಘೋರಘೋರತರೇಭ್ಯಃ । ಸರ್ವೇಭ್ಯಃ ಸರ್ವಶರ್ವೇಭ್ಯೋ ನಮಸ್ತೇ ಅಸ್ತು ರುದ್ರರೂಪೇಭ್ಯಃ ॥

ಈಮಂತ್ರದಿಂದ ಪಶ್ಚಿಮದಿಕ್ಕಿನಲ್ಲಿ ಎಳ್ಳನ್ನೂ—"ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ । ತನ್ನೋ ರುದ್ರಃ ಪ್ರಚೋದಯಾತ್ ॥ ಈಮಂತ್ರದಿಂದ ಗೋಧಿಯನ್ನೂ ಊರಬೇಕು.

"ಆಪೋಹಿಷ್ಠಾಮಯೋ ಭುವಸ್ತಾನ ಊರ್ಜೇ ದಧಾತನ ಮಹೇರಣಾಯ ಚಕ್ಷಸೇ । ಯೋ ವಃ ಶಿವತಮೋ ರಸಸ್ತಸ್ಯ ಭಾಜಯತೇ ಹನಃ ॥ ಉಶತೀರಿವ ಮಾತರಃ ॥ ತಸ್ಮಾ ಅರಂಗಮಾಮವೋ ಯಸ್ಯ ಕ್ಷಯಾಯ ಜನ್ವಥ ಆಪೋ ಜನಯಥಾ ಚ ನಃ ॥.

ಈಮಂತ್ರವನ್ನುಚ್ಚರಿಸುತ್ತ ಕಲಶೋದಕವನ್ನೆರೆದು ಅದನ್ನು ಅಷ್ಟವಿಧಾರ್ಚನದಿಂದ ಪೂಜಿಸಬೇಕು ॥ ಇತ್ಯಂಕುರಾರ್ಪಣಂ ಸಮಾಪ್ತಂ ॥

## ॥ ಅಥಮಂಟಪದೇವತಾಪ್ರತಿಷ್ಠಾ ॥

ಯಜಮಾನನು ದೇಶಕಾಲಗಳನ್ನು ಕೀರ್ತಿಸಿ" ಅಸ್ಯಾಂ ಶುಭತಿಥೌ ದೀಕ್ಷಾಂಕ

ರ್ಮಾಂಗಭೂತಮಂಟಪದೇವತಾಸ್ಥಾಪನಂ ಕರಿಷ್ಯೇ,, ಎಂದು ಸಂಕಲ್ಪವಂಮಾಡಿ.

"ಯಾ ಜಾತಾ ಓಷಧಯೋ ದೇವೇಭ್ಯಸ್ತ್ರಿಯುಗಂ ಪುರಾ ತಾಸಾಂ ಪ ರ್ವರಾಭ್ಯಾಸಂ ಪರಿಸ್ತರಮಾಹರನ್ । ಮಂದಾಮಿ ಬಭ್ರೂಣಾಮಹಂ ಶತಂ ಧಾ ಮಾನಿ ಸಪ್ತ ಚ ಶತಂ ವೋ ಅಂಬ ಧಾಮಾನಿ ಸಹಸ್ರಮುತ ವೋ ರುಹಃ ॥ ಅಥ ಶತಕೃತ್ವೋ ಯೂಯುಮಿಮಂ ಮೇ ಅಗದಂ ಕೃತಂ ॥ ಪುಷ್ಪಾವತೀಃ ಪ್ರಸೂವತೀಃ ಫಲಿನೀರಫಲಾ ಉತ ॥ ಅಶ್ವಾ ಇವ ಸಜಿತ್ವರೀರ್ವೀರುಧಃ ಪಾ ರಯಿಷ್ಣವಃ । ಯಾಃ ಫಲೀನೀರ್ಯಾ ಅಫಲಾ ಅಪುಷ್ಪಾ ಯಾಶ್ಚ ಪುಷ್ಪಿಣೀಃ ಬೃಹಸ್ಪತಿಪ್ರಸೂತಾಸ್ತಾನೋ ಮುಂಚ ತ್ವಗ್ಂ ಹಸಃ ॥

ಈಮಂತ್ರಗಳನ್ನುಚ್ಚರಿಸುತ್ತ ಮಂಟಪದಮೇಲೆ ಅಕ್ಷತೆಗಳನ್ನು ಚಲ್ಲಿ ಆ ಮಂ ಟಪದ ದಶದಿಕ್ಕುಗಳಲ್ಲಿ ಶತರುದ್ರರನ್ನು ಆಹ್ವಾನಮಾಡಬೇಕು.

ಇಂದ್ರದಿಕ್ಕಿನಲ್ಲಿ ॥ ॥ ತ್ರಾತಾರಮಿಂದ್ರಮವಿತಾರಮಿಂದ್ರಂ ಹವೇ ಹವೇ ಸುಹವಗ್ಂ ಶೂರಮಿಂದ್ರಂ ॥ ಹುವೇನುಶಕ್ರಂ ಪುರುಹೂತಮಿಂ ದ್ರಗ್ಂ ಸ್ವಸ್ತಿ ನೋ ಮಘವಾ ಧಾತ್ವಿಂದ್ರಃ ॥

ಈಮಂತ್ರದಿಂದ ಇಂದ್ರನನ್ನು ಆಹ್ವಾನಿಸಿ, ಕಪಿಲೇಶಾಯನಮಃ । ಅಜಾಯ ನಮಃ ಬುದ್ಧಾಯನಮಃ । ವಜ್ರದೇಹಾಯನಮಃ । ಪ್ರಮರ್ದನಾಯನಮಃ ॥ ವಿಭೂತಯೇನಮಃ । ಅವ್ಯಯಾಯನಮಃ ।ಶಾಸ್ತ್ರೇನಮಃ । ಪಿನಾಕಿನೇನಮಃ । ತ್ರಿದಶಾಧಿಪಾಯನಮಃ । ಇಂದ್ರಪೀರ್ಯಾ ಇಂದ್ರಪೂಜಿತಾ ಹೇ ದಶರುದ್ರಾ ಸವಾಹನಾಃ ಸಶಕ್ತಯಃ ಸಪರಿವಾರಾಃ ಸಮಾಗತ್ಯಾತ್ರಮಂಟಪೇ ಮತ್ಕೃತಾನಶೇ ಷೋಪಚಾರಾನ್ ಸ್ವೀಕೃತ್ಯ ಪ್ರಸೀದಂತು ಭವಂತಃ ॥ ಎಂದು ಆಹ್ವಾನಮಾಡಿ ರುದ್ರರನ್ನುಪೂಜಿಸಬೇಕು.

ಅಗ್ನಿದಿಕ್ಕಿನಲ್ಲಿ ॥ ॥ತ್ವನ್ನೋ ಅಗ್ನೇ ವರುಣಸ್ಯ ವಿದ್ವಾನ್ ದೇವಸ್ಯ ಹೇಡೋ ವಯಾಸಿಸೀಷ್ಠಾಃ ಯಜಿಷ್ಠೋ ವಹ್ನಿತಮಃ ಶೋಶುಚಾನೋವಿಶ್ವಾ ದ್ವೇಷಾಗ್ಂಸಿ ಪ್ರಮುಮುಗ್ಧ್ಯಸ್ಮತ್ ॥

ಈ ಮಂತ್ರದಿಂದ ಅಗ್ನಿಯನ್ನು ಆಹ್ವಾನಿಸಿ.— ಅಗ್ನಿರುದ್ರಾಯನಮಃ | ಹುತಾಶಿನೇನಮಃ | ಪಿಂಗಲಾಯನಮಃ | ಖಾದಕಾಯನಮಃ | ಹರಾಯನಮಃ | ಜ್ವಲನಾಯನಮಃ | ದಹನಾಯನಮಃ | ಬಭ್ರವೇನಮಃ | ಭಸ್ಮಾಂತಕಾಯನಮಃ | ಕ್ಷಯಾಂತಕಾಯನಮಃ | ಅಗ್ನಿವೀರ್ಯಾ ಅಗ್ನಿಪೂಜಿತಾ ಹೇ ದಶರುದ್ರಾಃ | ಸವಾಹನಾಃ | ಸಶಕ್ತಯಃ | ಸಪರಿವಾರಾಃ | ಸಮಾಗತ್ಯಾತ್ರಮಂಟಪೇ | ಮತ್ಕೃತಾನಶೇಷೋಪಚಾರಾನ್ ಸ್ವೀಕೃತ್ಯ ಪ್ರಸೀದಂತು ಭವಂತಃ || ಎಂದು ಆಹ್ವಾನ ಮಾಡಿ ರುದ್ರರನ್ನು ಪೂಜಿಸಬೇಕು.

ದಕ್ಷಿಣದಿಕ್ಕಿನಲ್ಲಿ || ||

ಸುಗಂ ನಃ ಪಂಥಾಮಭಯಂ ಕೃಣೋತು || ಯಸ್ಮಿನ್ನಕ್ಷತ್ರೇ ಯಮಏತಿ ರಾಜಾ || ಯಸ್ಮಿನ್ನೇನಮಭ್ಯಷಿಂಚಂತ ದೇವಾಃ || ತದಸ್ಯ ಚಿತ್ರಗ್ಂ ಹವಿಷಾ ಯಜಾಮ ||

ಈ ಮಂತ್ರದಿಂದ ಯಮನನ್ನು ಆಹ್ವಾನಿಸಿ. — ವಿಧಾತ್ರೇನಮಃ | ಕರ್ತ್ರೇನಮಃ | ಧಾತ್ರೇನಮಃ | ಶ್ರೀಕಾಮಾಯನಮಃ | ಸರ್ವನಿಯೋಕ್ತ್ರೇನಮಃ | ಯಾಮ್ಯೇಶಾಯನಮಃ | ರಮೇಶಾಯನಮಃ | ಸಂಯೋಕ್ತ್ರೇನಮಃ | ಧರ್ಮಾಯನಮಃ | ಮೃತ್ಯುಹರಾಯನಮಃ | ಯಮವೀರ್ಯಾ ಯಮಪೂಜಿತಾ ಹೇ ದಶರುದ್ರಾಃ | ಸಾಯುಧಶಕ್ತಿಪರಿವಾರಾ ಅತ್ರಾಗತ್ಯ ಮತ್ಕೃತೋಪಚಾರಾನ್ ಸ್ವೀಕೃತ್ಯ ಪ್ರಸೀದಂತು ಭವಂತಃ || ಎಂದು ರುದ್ರರನ್ನು ಆಹ್ವಾನಮಾಡಿ ಪೂಜಿಸಬೇಕು.

ನೈಋತ್ಯದಿಕ್ಕಿನಲ್ಲಿ || ||

ಅಸುನ್ವಂತಮಯಜಮಾನಮಿಚ್ಛಸ್ತೇನಸ್ಯೇತ್ಯಾಂ ತಸ್ಕರಸ್ಯಾನ್ವೇಷಿ || ಅನ್ಯಮಸ್ಮದಿಚ್ಛಸಾತ ಇತ್ಯಾನಮೋ ದೇವಿ ನಿರ್ಋತೇ ತುಭ್ಯಮಸ್ತು ||

ಈ ಮಂತ್ರದಿಂದ ನಿರ್ಋತಿಯನ್ನು ಆಹ್ವಾನಮಾಡಿ — ನೈಋತೇಶಾಯನಮಃ | ಮಾರಣಾಯನಮಃ | ಹಂತ್ರೇನಮಃ | ಕ್ರೂರದೃಷ್ಟಯೇನಮಃ | ಭಯಾನಕಾನಮಃ | ಊರ್ಧ್ವಕೇಶಾಯನಮಃ | ವಿರೂಪಾಕ್ಷಾಯನಮಃ | ಧೂಮ್ರಾಯ

ನಮಃ | ಲೋಹಿತಾಯನಮಃ | ದಂಷ್ಟ್ರಕಾಯನಮಃ | ನೈರ್ಋತಿವೀರ್ಯಾ ನೈರ್ಋತಿಪೂಜಿತಾ ಹೇ ದಶರುದ್ರಾಃ | ಸಾಯುಧಶಕ್ತಿಪರಿವಾರಾ ಅತ್ರಾಗತ್ಯ ಮತ್ಕೃತೋಪಚಾರಾನ್ ಸ್ವೀಕೃತ್ಯ ಪ್ರಸೀದಂತು ಭವಂತಃ || ಎಂದು ರುದ್ರರನ್ನು ಆಹ್ವಾನಮಾಡಿ ಪೂಜಿಸಬೇಕು.

ಪಶ್ಚಿಮದಿಕ್ಕಿನಲ್ಲಿ || ||

ತತ್ವಾಯಾಮಿ ಬ್ರಹ್ಮಣಾ ವಂದಮಾನಸ್ತದಾಶಾಸ್ತೇ ಯಜಮಾನೋ ಹವಿರ್ಭಿಃ । ಅಹೇಡಮಾನೊ ವರುಣೇಹಬೋಧ್ಯುರುಶಗ್ಂ ಸಮಾವ ಆಯುಃ ಪ್ರಮೋಷೀಃ ||

ಈ ಮಂತ್ರದಿಂದ ವರಣನನ್ನು ಆಹ್ವಾನಿಸಿ— ಬಲಾಯನಮಃ | ಅತಿಬಲಾಯನಮಃ | ಪಾಶಹಸ್ತಾಯನಮಃ | ಮಹಾಬಲಾಯನಮಃ | ಶ್ವೇತಾಯನಮಃ | ಜಯಭದ್ರಾಯನಮಃ | ದೀರ್ಘಬಾಹವೇನಮಃ | ಬಲಾಂತಕಾಯನಮಃ | ಬಡವಾಮುಖಾಯನಮಃ | ಭೈರವಾಯನಮಃ | ವರುಣವೀರ್ಯಾ ವರುಣಪೂಜಿತಾ ಹೇ ದಶರುದ್ರಾಃ | ಸಾಯುಧಶಕ್ತಿಪರಿವಾರಾ ಅತ್ರಾಗತ್ಯ ಮತ್ಕೃತೋಪಚಾರಾನ್ ಸ್ವೀಕೃತ್ಯ ಪ್ರಸೀದಂತು ಭವಂತಃ || ಎಂದು ರುದ್ರರನ್ನು ಆಹ್ವಾನಮಾಡಿ ಪೂಜಿಸಬೇಕು.

ವಾಯುವ್ಯದಿಕ್ಕಿನಲ್ಲಿ || ||

ಆನೋ ನಿಯುದ್ಭಿಃ ಶತಿನೀಭಿರಧ್ವರಂ ಸಹಸ್ರಿಣೀಭಿರುಪಯಾಹಿ ಯಜ್ಞಂ ವಾಯೋ ಅಸ್ಮಿನ್ ಹವಿಷಮಾದಯಸ । ಯೂಯಂ ಪಾತು ಸ್ವಸ್ತಿಭಿಃ ಸದಾವಃ ||

ಈ ಮಂತ್ರದಿಂದ ವಾಯುವನ್ನು ಆಹ್ವಾನಮಾಡಿ— ಶೀಘ್ರಾಯನಮಃ | ಲಘುವೇನಮಃ | ವಾಯುವೇಗಾಯನಮಃ | ಸೂಕ್ಷ್ಮಾಯನಮಃ | ತೀಕ್ಷ್ಣಾಯನಮಃ ಭಯಂಕರಾಯನಮಃ | ಪಂಚಾಕ್ಷರಾಯನಮಃ | ಪಂಚಶಿಖಾಯನಮಃ | ಕಪರ್ದಿನೇನಮಃ | ಮೇಘವಾಹನಾಯನಮಃ | ವಾಯುವೀರ್ಯಾ ವಾಯುಪೂಜಿತಾ

ಹೇ ದಶರುದ್ರಾಃ ಸಾಯುಧಶಕ್ತಿಪರಿವಾರಾ ಅತ್ರಾಗತ್ಯ ಮತ್ಕೃತೋಪಚಾರಾನ್ ಸ್ವೀಕೃತ್ಯ ಪ್ರಸೀದಂತು ಭವಂತಃ ॥ ಎಂದು ರುದ್ರರನ್ನು ಆಹ್ವಾನಿಸಿ ಪೂಜಿಸಬೇಕು.

ಉತ್ತರದಿಕ್ಕಿನಲ್ಲಿ ॥

ವಯಗ್‍ಂ ಸೋಮವ್ರತೇ ತವ ಮನಸ್ತನೂಷು ಬಿಭ್ರತಃ ॥ ಪ್ರಜಾವಂತಃ ಸಚೇಮಹಿ ಇಂದ್ರಾಣೀ ದೇವೀ ಸುಭಗಾ ಸುಪತ್ನೀ

ಈ ಮಂತ್ರದಿಂದ ಕುಬೇರನನ್ನು ಆಹ್ವಾನಮಾಡಿ— ನಿಧೀಶಾಯನಮಃ ರೂಪವತೇನಮಃ । ಧನ್ಯಾಯನಮಃ । ಸೌಮ್ಯಾಯನಮಃ । ಶಾಂತಾಯನಮಃ ಜಟಾಧರಾಯನಮಃ । ಕಾಮಪ್ರಸಾದಾಯನಮಃ । ಲಕ್ಷ್ಮೀಶಾಯನಮಃ । ಪ್ರಕಾಶಾಯನಮಃ । ಇಂದುಯಜ್ಞಪಾಯನಮಃ । ಕುಬೇರಪರ್ಯಾಃ । ಕುಬೇರಪೂಜಿತಾ ಹೇ ದಶರುದ್ರಾಃ ಸಾಯುಧಶಕ್ತಿಪರಿವಾರಾ ಅತ್ರಾಗತ್ಯ ಮತ್ಕೃತೋಪಚಾರಾನ್ ಸ್ವೀಕೃತ್ಯ ಪ್ರಸೀದಂತು ಭವಂತಃ ॥ ಎಂದು ರುದ್ರರನ್ನು ಆಹ್ವಾನ ಮಾಡಿ ಪೂಜಿಸಬೇಕು.

ಈಶಾನ ದಿಕ್ಕಿನಲ್ಲಿ ॥

ತಮೀಶಾನಂ ಜಗತಸ್ತಸ್ಥುಷಸ್ಪತಿಂ । ಧಿಯಂ ಜಿನ್ವಮವಸೇ ಹೂಮಹೇ ವಯಂ ॥ ಪೂಷಾನೋ ಯಥಾ ವೇದಸಾಮಸದ್ವೃಧೇ ॥ ರಕ್ಷಿತಾಪಾಯುರದಬ್ಧಃ ಸ್ವಸ್ತಯೇ ॥

ಈ ಮಂತ್ರದಿಂದ ಈಶಾನನನ್ನು ಆಹ್ವಾನಮಾಡಿ— ಈಶಾನಾಯನಮಃ । ವಿದ್ಯೇಶಾಯನಮಃ । ಜ್ಞಾನವತೇನಮಃ । ಮಾತೃಪಿಂಗಲಾಯನಮಃ । ಭೂತಪಾಲಾಯನಮಃ । ಅಜಾಯನಮಃ । ಬಲಯೇನಮಃ । ಮಿತ್ರಾಯನಮಃ । ಸರ್ವವಿದ್ಯಾಧಿಪಾಯನಮಃ । ಸುಖಕೃತೇನಮಃ ॥ ಈಶಾನಪರ್ಯಾ ಈಶಾನಪೂಜಿತಾ ಹೇ ದಶರುದ್ರಾಃ । ಸಾಯುಧಶಕ್ತಿಪರಿವಾರಾ ಅತ್ರಾಗತ್ಯ ಮತ್ಕೃತೋಪಚಾ

ರಾನ್ ಸ್ವೀಕೃತ್ಯ ಪ್ರಸೀದಂತು ಭವಂತಃ || ಎಂದು ರುದ್ರರನ್ನು ಆಹ್ವಾನಮಾಡಿ ಪೂಜಿಸಬೇಕು.

ಪಶ್ಚಿಮವಾಯುವ್ಯ ದಿಕ್ಕುಗಳ ಮಧ್ಯದ ಅಧೋಭಾಗದಲ್ಲಿ.

ಸ್ಯೋನಾ ಪೃಥಿವೀ ಭವಾನೃಕ್ಷರಾ ನಿವೇಶೀನಿ ಯಚ್ಛಾನಃ ಶರ್ಮಸ ಪ್ರಥಾಃ ||

ಈ ಮಂತ್ರದಿಂದ ವಿಷ್ಣುವನ್ನು ಆಹ್ವಾನಿಸಿ ಧೀರಾಯನಮಃ । ವಿಷಧರಾಯನಮಃ । ಗ್ರಸನಾಯನಮಃ । ಪಾಲಕಾಯನಮಃ । ಶುಭಾಯನಮಃ । ಸುವೀರ್ಯಾಯನಮಃ । ವೃಷಭಾಯನಮಃ । ಪಾತಾಲೇಶಾಯನಮಃ । ಲೋಹಿತಾಯನಮಃ । ಅನಂತಾಯನಮಃ || ವಿಷ್ಣುವೀರ್ಯಾ ವಿಷ್ಣುಪೂಜಿತಾ ಹೇ ದಶರುದ್ರಾಃ ಸಾಯುಧಶಕ್ತಿಪರಿವಾರಾಃ ಅತ್ರಾಗತ್ಯ ಮತ್ಕೃತೋಪಚಾರಾನ್ ಸ್ವೀಕೃತ್ಯ ಪ್ರಸೀದಂತು ಭವಂತಃ || ಎಂದು ರುದ್ರರನ್ನು ಆಹ್ವಾನಮಾಡಿ ಪೂಜಿಸಬೇಕು.

ಪೂರ್ವೇಶಾನದಿಕ್ಕುಗಳ ಮಧ್ಯದ ಊರ್ಧ್ವಭಾಗದಲ್ಲಿ.

ಅಸ್ಮೇ ರುದ್ರಾ ಮೇಹನಾ ಪರ್ವತಾಸೋ ವೃತಹತ್ಯೇ ಭರಹೂತೌ ಸಜೋಷಾಃ || ಯಃ ಶಂಸತೇ ಸ್ತುವತೇ ಧಾಯಿ ವಜ್ರಮಿಂದ್ರಜ್ಯೇಷ್ಠಾ ಅಸ್ಮಾನ್ನವಂತು ದೇವಾಃ ||

ಈ ಮಂತ್ರದಿಂದ ಬ್ರಹ್ಮನನ್ನು ಆಹ್ವಾನಮಾಡಿ ಗಣಾಧ್ಯಕ್ಷಾಯನಮಃ । ಸಭಸೇನಮಃ । ಲಿಪ್ಸವೇನಮಃ || ಶಂಭವೇನಮಃ । ವಿಭವೇನಮಃ । ವಿಚಕ್ಷಣಾಯನಮಃ । ವಿವಾಹಾಯನಮಃ । ಗುಣಸಂವಾಹಾಯನಮಃ । ತ್ರ್ಯಕ್ಷಾಯನಮಃ ತ್ರಿದಶವಂದಿತಾಯನಮಃ । ಬ್ರಹ್ಮವೀರ್ಯಾ ಬ್ರಹ್ಮಪೂಜಿತಾ ಹೇ ದಶರುದ್ರಾಃ ಸಾಯುಧಶಕ್ತಿಪರಿವಾರಾ ಅತ್ರಾಗತ್ಯ ಮತ್ಕೃತೋಪಚಾರಾನ್ ಸ್ವೀಕೃತ್ಯ ಪ್ರಸೀದಂತು ಭವಂತಃ || ಎಂದು ರುದ್ರರನ್ನು ಆಹ್ವಾನಮಾಡಿ ಪೂಜಿಸಬೇಕು. ।

ಇತಿ ಮಂಟಪದೇವತಾಪ್ರತಿಷ್ಠಾ



ಸಮಾಪ್ತಾ

## ॥ ಅಥ ಶಿವಲಿಂಗಸಂಸ್ಕಾರಃ ॥

ಮಂಟಪದ ಉತ್ತರಭಾಗದಲ್ಲಿ

" ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ। ಧಿಯೋ ಯೋ ನಃ ಪ್ರಚೋದಯಾತ್ ॥

ಎಂಬೀಮಂತ್ರದಿಂದ ಗೋಮೂತ್ರವನ್ನೂ,

" ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಂ। ಈಶ್ವರೀಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಂ ॥

ಈ ಮಂತ್ರದಿಂದ ಗೋಮಯವನ್ನೂ,

" ಆಪ್ಯಾಯಸ್ವಸಮೇತು ತೇ ವಿಶ್ವತಃ ಸೋಮವೃಷ್ಣ್ಯಂ ಭವಾವಾಜಸ್ಯ ಸಂಗಥೇ ॥

ಈ ಮಂತ್ರದಿಂದ ಕ್ಷೀರವನ್ನೂ,

" ದಧಿಕ್ರಾವ್ಣೋ ಅಕಾರಿಷಂ ಜಿಷ್ಣೋರಶ್ವಸ್ಯ ವಾಜಿನಃ। ಸುರಭಿನೋ ಮುಖಾಕರತ್ಪ್ರಾಣ ಆಯೂಂಷಿ ತಾರಿಷತ್ ॥

ಈ ಮಂತ್ರದಿಂದ ದಧಿಯನ್ನೂ,

" ಶುಕ್ರಮಸಿ ಜ್ಯೋತಿರಸಿ ತೇಜೋಸಿ ದೇವೋ ವಃ ಸವಿತೋತ್ಪುನಾತ್ವಚ್ಛಿದ್ರೇಣ ಪವಿತ್ರೇಣ ವಸೋಃ ಸೂರ್ಯಸ್ಯ ರಶ್ಮಿಭಿಃ

ಈ ಮಂತ್ರದಿಂದ ಘೃತವನ್ನೂ,

" ರೋಚನೋ ರೋಚಮಾನಃ ಶೋಭನಃ ಶೋಭಮಾನಃ ಕಲ್ಯಾಣಃ ॥

ಈ ಮಂತ್ರದಿಂದ ಗೋರೋಚನವನ್ನೂ ಹಾಕಿ ಸಂಮಾರ್ಜನವನ್ನು ಮಾಡಿ ಆ ಸ್ಥಲವನ್ನು ರಂಗವಲ್ಯಾದಿಗಳಿಂದಲಂಕರಿಸಿ ಅಲ್ಲಿ ಒಂದು ಪಾತ್ರೆಯನ್ನಿಟ್ಟು

ಪಂಚಸೂತ್ರಘಟಿತಸ್ಫಟಿಕಲಿಂಗವನ್ನಾಗಲಿ ಅಥವಾ ಶ್ರೀಶೈಲಜಲಿಂಗವನ್ನಾಗಲಿ ತೆಗೆದುಕೊಂಡು ವೇದಮಂತ್ರಗಳಿಂದ ತೊಳೆದು ಆ ಪಾತ್ರೆಯಲ್ಲಿಡಬೇಕು. ಆಮೇಲೆ ಆಚಾರ್ಯನು ಪ್ರಾಣಾಯಾಮವನ್ನು ಮಾಡಿ ದೇಶಕಾಲಗಳನ್ನು ಕೀರ್ತಿಸಿ " ಅಸ್ಯಾಂ ಶುಭತಿಥೌ ಕರ್ಷಣಾದಿದೋಷಶಾಂತ್ಯರ್ಥಂ ಹಿರಣ್ಯಶೃಂಗಂ ಪವಮಾನಃ ಸುವರ್ಜನಃ ನಮಸ್ತೇ ರುದ್ರಮನ್ಯವ ಇತ್ಯನುವಾಕ್ಯೈಃ ಶಿವಲಿಂಗಂ ಸ್ನಾಪಯಿಷ್ಯೇ ,, ಎಂದು ಸಂಕಲ್ಪವಂ ಮಾಡಿ

" ಹಿರಣ್ಯಶೃಂಗಂ ವರುಣಂ ಪ್ರಪದ್ಯೇ

ತೀರ್ಥಂ ಮೇ ದೇಹಿ ಯಾಚಿತಃ । ಯನ್ಮಯಾಭುಕ್ತಮಸಾಧೂನಾಂ ಪಾಪೇಭ್ಯಶ್ಚ ಪ್ರತಿಗ್ರಹಃ । ತನ್ನ ಇಂದ್ರೋ ವರುಣೋ ರಾಜಾ ಪಾಣಿನಾ ಹ್ಯವಮರ್ಶತ್ ಯನ್ಮೇ ಮನಸಾ ವಾಚಾ ಕರ್ಮಣಾ ವಾ ದುಷ್ಕೃತಂಕೃತಂ । ತನ್ನ ಇಂದ್ರೋ ವರುಣೋ ಬೃಹಸ್ಪತಿಃ ಸವಿತಾ ಚ ಪುನಂತು ಪುನಃ ಪುನಃ । ನಮೋಽಗ್ನಯೇಪ್ಸುಮತೇ ನಮಇಂದ್ರಾಯ ನಮೋವರುಣಾಯ ನಮೋವಾರುಣ್ಯೈ । ನಮೋಽದ್ಭ್ಯಃ ಯದಪಾಂ ಕ್ರೂರಂ ಯದಮೇಧ್ಯಂ ಯದಶಾಂತಂ ತದಪಗಚ್ಛತಾತ್ ಅತ್ಯಾಶನಾದತೀಪಾನಾದ್ಯಚ್ಚ ಉಗ್ರಾತ್ಪ್ರತಿಗ್ರಹಾತ್ । ತನ್ಮೇ ವರುಣೋ ರಾಜಾ ಪಾಣಿನಾ ಹ್ಯವಮರ್ಶತು ಸೋಽಹಮಪಾಪೋ ವಿರಜೋ ನಿರ್ಮುಕ್ತೋ ಮುಕ್ತ ಕಿಲ್ಬಿಷಃ । ನಾಕಸ್ಯಪೃಷ್ಠಮಾರುಹ್ಯ ಗಚ್ಛೇದ್ಬ್ರಹ್ಮ ಸಲೋಕತಾಂ । ಯಶ್ಚಾಪ್ಸು ವರುಣಃ ಸಪುನಾತ್ವಘಮರ್ಷಣಃ ॥...............

ಪವಮಾನಃಸುವರ್ಜನಃ ।

ಪವಿತ್ರೇಣ ವಿಚರ್ಷಣಿಃ । ಯಃ ಪೋತಾಸಮನಾತು ಮಾ । ಪುನಂತು ಮಾ ದೇವಜನಾಃ । ಪುನಂತು ಮನವೋ ಧಿಯಾ । ಪುನಂತು ವಿಶ್ವ ಆಯವಃ ಜಾತವೇದಃ ಪವಿತ್ರವತ್ ಪವಿತ್ರೇಣ ಪುನೀಹಿ ಮಾ । ಶುಕ್ರೇಣ ದೇವ ದೀದ್ಯತ್ ॥ ಅಗ್ನೇ ಕ್ರತ್ವಾ ಕ್ರತೂಗ್‍ಂರನು । ಯತ್ತೇ ಪವಿತ್ರಮರ್ಚಿಷಿ । ಅಗ್ನೇ ವಿತತಮಂತರಾ ಬ್ರಹ್ಮ ತೇನ ಪುನೀಮಹೇ । ಉಭಾಭ್ಯಾಂ ದೇವಸವಿತಃ ಪವಿತ್ರೇಣ ಸವೇನ ಚ ಇದಂ ಬ್ರಹ್ಮ ಪುನೀಮಹೇ । ವೈಶ್ವದೇವೀ ಪುನತೀ ದೇವ್ಯಾಗಾತ್

ಯಸ್ಯೈ ಬಹ್ವೀಸ್ತನುವೋ ವೀತಪೃಷ್ಠಾಃ । ತಯಾ ಮದಂತಃ ಸಧಮಾದ್ಯೇಷು ವಯಗ್ಂ ಸ್ಯಾಮಪತಯೋ ರಯೀಣಾಂ । ವೈಶ್ವಾನರೋ ರಶ್ಮಿಭಿರ್ಮಾ ಪುನಾತು ವಾತಃ ಪ್ರಾಣೇನೇಷಿರೋ ಮಯೋಭೂಃ । ದ್ಯಾವಾಪೃಥಿವೀ ಪಯಸಾ ಪಯೋಭಿಃ ಋತಾವರೀ ಯಜ್ಞಿಯೇ ಮಾ ಪುನೀತಾಂ ॥ ಬೃಹದ್ಭಿಃ ಸವಿತಸ್ತೃಭಿಃ । ವರ್ಷಿಷ್ಠೈರ್ದೇವಮನ್ಮಭಿಃ । ಅಗ್ನೇ ದಕ್ಷೈಃ ಪುನೀಹಿ ಮಾ । ಯೇನ ದೇವಾ ಅಪುನತ । ಯೇನಾಪೋ ದಿವ್ಯಂಕಶಃ । ತೇನ ದಿವ್ಯೇನ ಬ್ರಹ್ಮಣಾ ಇದಂ ಬ್ರಹ್ಮ ಪುನೀಮಹೇ । ಯಃ ಪವಮಾನೀರಧ್ಯೇತಿ । ಋಷಿಭಿಃ ಸಂಭೃತಗ್ಂ ರಸಂ ಸರ್ವಗ್ಂ ಸಪೂತಮಶ್ನಾತಿ । ಸ್ವದಿತಂ ಮಾತರಿಶ್ವನಾ । ಪವಮಾನೀರ್ಯೋ ಅಧ್ಯೇತಿ । ಋಷಿಭಿಃ ಸಂಭೃತೋ ರಸಃ । ತಸ್ಮೈ ಸರಸ್ವತೀ ದುಹೇ ಕ್ಷೀರಗ್ಂ ಸರ್ಪಿರ್ಮಧೂದಕಂ । ಪಾವಮಾನೀಃ ಸ್ವಸ್ತ್ಯಯನೀಃ । ಸುದುಘಾಹಿ ಪಯಸ್ವತೀಃ ಋಷಿಭಿಃ ಸಂಭೃತೋ ರಸಃ ॥ ಬ್ರಾಹ್ಮಣೇಷ್ವಮೃತಗ್ಂ ಹಿತಂ ॥ ಪಾವಮಾನೀರ್ದಿಶಂತು ನಃ । ಇಮಂ ಲೋಕಮಥೋ ಅಮುಂ ॥ ಕಾಮಾನ್ ಸಮರ್ಧಯಂತು ನಃ ದೇವೀರ್ದೇವೈಃ ಸಮಾಭೃತಾಃ । ಪಾವಮಾನೀಃ ಸ್ವಸ್ತ್ಯಯನೀಃ ಸುದುಘಾಹಿ ಘೃತಶ್ಚುತಃ ॥ ಋಷಿಭಿಃ ಸಂಭೃತೋ ರಸಃ ಬ್ರಾಹ್ಮಣೇಷ್ವಮೃತಗ್ಂ ಹಿತಂ ॥ ಯೇನ ದೇವಾ ಅಪುನತ । ಆತ್ಮಾನಂ ಪುನತೇ ಸದಾ ॥ ತೇನ ಸಹಸ್ರಧಾರೇಣ ಪಾವಮಾನ್ಯಃ ಪುನಂತು ಮಾ ಪ್ರಾಜಾಪತ್ಯಂ ॥ ಶತೋದ್ಯಾನಗ್ಂ ಹಿರಣ್ಮಯಂ ತೇನ ಬ್ರಹ್ಮವಿದೋ ವಯಂ । ಪೂತಂ ಬ್ರಹ್ಮ ಪುನೀಮಹೇ ॥ ಇಂದ್ರಃ ಸುನೀತೀ ಸಹ ಮಾ ಪುನಾತು ॥ ಸೋಮಃ ಸ್ವಸ್ತ್ಯಾ ವರುಣಃ ಸಮೀಚ್ಯಾ । ಯಮೋರಾಜಾ ಪ್ರಮೃಣಾಭಿಃ ಪುನಾತು ಮಾ ಜಾತವೇದಾಮೂರ್ಜಯಂತ್ಯಾ ಪುನಾತು.

ನಮಸ್ತೇ ರುದ್ರಮನ್ಯವ ಉತೋತ ಇಷವೇ ನಮಃ । ನಮಸ್ತೇ ಅಸ್ತು ಧನ್ವನೇ ಬಾಹುಭ್ಯಾಮುತತೇ ನಮಃ ಯಾತ ಇಷುಃ ಶಿವತಮಾ ಶಿವಂ ಬಭೂವತೇ ಧನುಃ ।ಶಿವಾ ಶರವ್ಯಾ ಯಾ ತವ ತಯಾ ನೋ ರುದ್ರ ಮೃಡಯ । ಯಾ ತೇ ರುದ್ರ ಶಿವಾತನೂ ರಘೋರಾ ಪಾಪ ಕಾಶಿನೀ ! ತಯಾ ನಸ್ತನುವಾ ಶಂತಮಯಾ ಗಿರಿಶಂ ತಾಭಿ ಚಾಕಶೀಹಿ । ಯಾಮಿಷುಂ ಗಿರಶಂತಹಸ್ತೇ ಬಿಭರ್ಷ್ಯಸ್ತವೇ ಶಿವಾಂ ಗಿರಿತ್ರತಾಂ

ಸ್ಯ ವಸುಶ್ರುತಋಷಿಃ । ಅಗ್ನಿರ್ದೇವತಾ । ತ್ರಿಷ್ಟುಪ್ ಛಂದಃ । ಅಗ್ನ್ಯರ್ಚನೇ ವಿನಿಯೋಗಃ । " ವಿಶ್ವಾನಿನೋದುರ್ಗಹಾಜಾತವೇದಃ ,, ಎಂದು ಪೂರ್ವದಿಕ್ಕಿನಲ್ಲಿಯೂ, " ಸಿಂಧುಂನ ನಾವಾ ದುರಿತಾತಿಪರ್ಷಿ ,, ಎಂದು ಅಗ್ನಿದಿಕ್ಕಿನಲ್ಲಿಯೂ, " ಅಗ್ನೇ ಅತ್ರಿವನ್ಮನಸಾ ಗೃಣಾನಃ ,, ಎಂದು ದಕ್ಷಿಣದಿಕ್ಕಿನಲ್ಲಿಯೂ, " ಅಸ್ಮಾಕಂ ಬೋಧ್ಯವಿತಾ ತನೂನಾಂ ,, ಎಂದು ನೈಋತ್ಯದಿಕ್ಕಿನಲ್ಲಿಯೂ, " ಯಸ್ತ್ವಾ ಹೃದಾ ಕೀರಿಣಾಮನ್ಯಮಾನಃ ,, ಎಂದು ಪಶ್ಚಿಮದಿಕ್ಕಿನಲ್ಲಿಯೂ, " ಅಮರ್ತ್ಯಂ ಮರ್ತ್ಯೋ ಜೋಹವೀಮಿ ,, ಎಂದು ವಾಯವ್ಯದಿಕ್ಕಿನಲ್ಲಿಯೂ, " ಜಾತವೇದೋ ಯಶೋ ಅಸ್ಮಾಸು ಧೇಹಿ ,, ಎಂದು ಉತ್ತರದಿಕ್ಕಿನಲ್ಲಿಯೂ, " ಪ್ರಜಾಭಿರಗ್ನೇ ಅಮೃತತ್ವಮಶ್ಯಾಂ ,, ಎಂದು ಈಶಾನ್ಯದಿಕ್ಕಿನಲ್ಲಿಯೂ ಅಗ್ನಿಯನ್ನು ಗಂಧಾಕ್ಷತ ಪುಷ್ಪಾದಿಗಳಿಂದ ಪೂಜಿಸಬೇಕು. ಆ ಮೇಲೆ ಒಂದು ಯಜ್ಞಕಟ್ಟಿಗೆಯನ್ನು ತೆಗೆದುಕೊಂಡು ಆ ಕಟ್ಟಿಗೆಯ ಆದಿ ಮಧ್ಯ ಅಂತ್ಯಗಳಲ್ಲಿ ಸೌಟಿನಿಂದ ಮೂರುಸಾರೆ ತುಪ್ಪವನ್ನೆರೆದು ಆದಿಮಧ್ಯಭಾಗಗಳನಡುವೆ ಹಿಡಿದುಕೊಂಡು । ಅಯಂತ ಇಧ್ಮ ಇತ್ಯಸ್ಯ ಮಂತ್ರಸ್ಯ ವಾಮದೇವಋಷಿಃ । ಅಗ್ನಿರ್ದೇವತಾ । ತ್ರಿಷ್ಟುಪ್ ಛಂದಃ । ಇಧ್ಮಾಧಾನೇ ವಿನಿಯೋಗಃ ॥

ಓಂ ಅಯಂತ ಇಧ್ಮ ಆತ್ಮಾ ಜಾತವೇದಸ್ತೇನೇಧ್ಯಸ್ವವರ್ಧಸ್ವಚೇದ್ಧ ವರ್ಧಯ ಚಾಸ್ಮಾನ್ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನಾನ್ನಾದ್ಯೇನ ಸಮೇಧಯ , ಸ್ವಾಹಾ ॥

ಜಾತವೇದಸೇ ಅಗ್ನಯೇ ಇದಂ ನ ಮಮ । ಎಂದು ಅಗ್ನಿಯಲ್ಲಿ ಹಾಕಬೇಕು. ಅನಂತರ ಸೌಟಿನಿಂದ ತುಪ್ಪವನ್ನು ತೆಗೆದುಕೊಂಡು " ಪ್ರಜಾಪತಯೇ ಸ್ವಾಹಾ ,, ಎಂದು ಉಚ್ಚರಿಸುತ್ತ ಅಗ್ನಿಯ ವಾಯುವ್ಯಮೂಲೆಯಿಂದ ಆಗ್ನೇಯ ಮೂಲೆಯವರೆಗೆ ಕಟ್ಟಿಗೆಯಮೇಲೆ ಅವಿಚ್ಛಿನ್ನವಾಗಿತ ಪ್ಪವನ್ನೆರೆದು, ಪುನಃ ತುಪ್ಪವನ್ನು ತೆಗೆದುಕೊಂಡು " ಪ್ರಜಾಪತಯೇ ಸ್ವಾಹಾ ,, ಎಂದುಚ್ಚರಿಸುತ್ತ ನೈಋತ್ಯಮೂಲೆಯಿಂದ ಈಶಾನ್ಯಮೂಲೆಯವರೆಗೆ ಅವಿಚ್ಛಿನ್ನವಾಗಿ ಎರೆದು, ಪುನಃ ತುಪ್ಪವನ್ನು ತೆಗೆದುಕೊಂಡು " ಅಗ್ನಯೆ ಸ್ವಾಹಾ ,, ಎಂದುಚ್ಚರಿಸಿ " ಅಗ್ನಯೇ ಇದಂನ

ಮಮ ,, ಎನ್ನುತ್ತ ಉತ್ತರಭಾಗವಲ್ಲಿಯೂ ಪೂರ್ವಭಾಗದಲ್ಲಿಯೂ ತುಪ್ಪವನ್ನೆರೆದು, ಪುನಃ ತುಪ್ಪವನ್ನು ತೆಗೆದುಕೊಂಡು " ಸೋಮಾಯ ಸ್ವಾಹಾ ,, ಎಂದುಚ್ಚರಿಸಿ " ಸೋಮಾಯೇದಂ ನ ಮಮ ,, ಎಂದೆನ್ನುತ್ತ ದಕ್ಷಿಣಭಾಗದಲ್ಲಿಯೂ ಹಾಗೂ ಪಶ್ಚಿಮಭಾಗದಲ್ಲಿಯೂ ಹವನಮಾಡಬೇಕು , ಆ ಮೇಲೆ ದೀಕ್ಷೆಯನ್ನು ಪ್ರಾರಂಭಿಸಬೇಕು.

## " ಕೌಪೀನಕಂಥಾಧಾರಣವಿಧಿಃ ,,

---

ಆಚಾರ್ಯನು ಅಗ್ನಿಯ ಪಶ್ಚಿಮದಿಕ್ಕಿನಲ್ಲಿ ಬಂದು ಕುಳಿತು ವಟುವನ್ನು ಪೂರ್ವಾಭಿಮುಖನನ್ನಾಗಿ ಕೂಡ್ರಿಸಿಕೊಂಡು ನಡದಲ್ಲಿ ಮೂರು ಸುತ್ತುನೂಲಿನದಾರವನ್ನು ಸುತ್ತಿ ಕೌಪೀನವನ್ನು ಹಾಕಿ । ಯುವಂ ವಸ್ತ್ರಾಣೀತ್ಯಸ್ಯ ಮಂತ್ರಸ್ಯ ಔಚಥ್ಯಋಷಿಃ । ದೀರ್ಘತಮಮಿತ್ರಾವರುಣೌ ದೇವತೇ । ತ್ರಿಷ್ಟುಪ್ ಛಂದಃ । ವಾಸೋ ಧಾರಣೇ ವಿನಿಯೋಗಃ ॥

" ಓಂ ಯುವಂ ವಸ್ತ್ರಾಣಿ ಪೀವಸಾವಸಾಥೇ ಯುವೋರಚ್ಛಿದ್ರಾಮಂತವೋ ಹಸರ್ಗಾಃ । ಅವಾತಿರಥಮನೃತಾನಿ ವಿಶ್ವಋತೇವ ಮಿತ್ರಾವರುಣಾ ಸಚೇಥೇ ,,

ಈ ಮಂತ್ರದಿಂದ ವಟುವಿಗೆ ಗೋತ್ರಾನುಸಾರವಾಗಿ ಬಣ್ಣದವಸ್ತ್ರವನ್ನು ಹೊದಿಸಬೇಕು.

ಆ ಮೇಲೆ ಆಚಾರ್ಯನು ತನ್ನ ಮತ್ತು ಅಗ್ನಿಯಮಧ್ಯದಿಂದ ವಟುವನ್ನು ಕಳಿಸಿ ಯಜ್ಞಪಾತ್ರೆಗಳ ಉತ್ತರದಲ್ಲಿ ಕುಳ್ಳಿರಿಸಿ ವಿಧಿಗನುಸಾರವಾಗಿ ಆಚಮನವನ್ನು ಮಾಡಿಸಿ ಪುನಃ ಅದೇಮಾರ್ಗದಿಂದ ಕರೆತಂದು ತನ್ನಬಲಭಾಗದಲ್ಲಿ ಕುಳ್ಳಿರಿಸಬೇಕು. ಆ ಮೇಲೆ ಆಚಾರ್ಯನು ತನ್ನ ಆಸನವನ್ನು ಹೊಂದಿ ಎದ್ದುನಿಂತು " ಮಂವರುಣಮಂಡಲಾಯನಮಃ ಹ್ರಃ ಅಸ್ತ್ರಾಯಫಟ್ ,, ಈ ಮಂತ್ರದಿಂದ ಹಸ್ತ

ವನ್ನು ಮೇಲಕ್ಕೆತ್ತಿ ಜಲವನ್ನು ಪ್ರೋಕ್ಷಿಸಿ " ಯಂ ,, ಎಂಬವಾಯುಬೀಜ ದಿಂದ ಒಣಗಿಸಿ " ಹ್ರೀಂ ,, ಎಂಬ ಮಾಯಾಬೀಜವನ್ನುಚ್ಚರಿಸಿ ಆಸನದಲ್ಲಿ ಕುಳಿ ತುಕೊಂಡು " ಪೃಥ್ವಿತ್ವಯಾಧೃತಾಲೋಕಾ ದೇವಿತ್ವಂ ವಿಷ್ಣುನಾಧೃತಾ | ತ್ವಂ ಚ ಧಾರಯ ಮಾಂ ದೇವಿ ಪವಿತ್ರಂ ಕುರು ಚಾಸನಂ || ,, ಕೂರ್ಮಾಸನಾಯನಮಃ ಅನಂತಾಸನಾಯನಮಃ ಯೋಗಾಸನಾಯನಮಃ ವಿಮಲಾಸನಾಯನಮಃ ಮಧ್ಯೇ ಪರಮಸುಖಾಸನಾಯನಮಃ " ಅಪಸರ್ಪಂತು ಯೇ ಭೂತಾ ಯೇ ಭೂತಾ ಭುವಿ ಸಂಸ್ಥಿತಾಃ | ಯೇ ಭೂತಾ ವಿಘ್ನಕರ್ತಾರಸ್ತೇನಶ್ಯಂತು ಶಿವಾಜ್ಞಯಾ ,, ಈ ಮಂ ತ್ರವನ್ನುಚ್ಚರಿಸಿ ಎಡಪಾದದ ಹಿಮ್ಮಡದಿಂದ ಭೂಮಿಯನ್ನು ಮೂರುಸಾರೆ ಒದೆ ದು " ಊರ್ಧ್ವಕೇಶಿವಿರೂಪಾಕ್ಷಿ ಮಾಂಸಶೋಣಿತ ಭಕ್ಷಿಣಿ | ತಿಷ್ಠದೇವಿಶಿಖಾ ಬಂಧೇಚಾಮುಂಡೇಹ್ಯಪರಾಜಿತೇ || ಅಪಕ್ರಾಮಂತು ಭೂತಾನಿ ಪಿಶಾಚಾಃ ಸರ್ವ ತೋದಿಶಃ |ಸರ್ವೇಷಾಮವಿರೋಧೇನ ಪೂಜಾಕರ್ಮಸಮಾರಭೇ || ಹೀಗೆಂದು ಆಸನಶುದ್ಧಿಯನ್ನು ಮಾಡಬೇಕು. ಆ ಮೇಲೆ ಪ್ರಾಣಾಯಾಮವನ್ನುಮಾಡಿ ಶ್ರೀ ಜಗದ್ಗುರು ಪಂಚಾಚಾರ್ಯರನ್ನು ಸ್ಮರಿಸಿ ಷಡಕ್ಷರೀನ್ಯಾಸವನ್ನು ಮಾಡಿ " ಪ್ರ ಸೀದ ದೇವದೇವೇಶ ದೇಹಮಾಶ್ರಿತ್ಯ ಮಾಮಕಂ | ವಿಮೋಚಯೈನಂ ವಿಶ್ವೇಶ ಘೃ ಣಯೈವ ಘೃಣಾನಿಧೇ || ಈ ಪ್ರಕಾರವಾಗಿ ಶಿವನನ್ನು ಪ್ರಾರ್ಥಿಸಿ, ಮಂತ್ರಾರ್ಥ ಸ್ವರೂಪನಾದ ಗುರುಸ್ವರೂಪನಾದ ಸರ್ವೇಶ್ವರನಾದ ಸರ್ವಾತ್ಮಕನಾದ ಸತ್ಯಜ್ಞಾ ನಾನಂದ ಲಕ್ಷಣನಾದ ದೇವತಾತತ್ವಸ್ವರೂಪನಾದ ಪರಬ್ರಹ್ಮನೇ ನಾನಿರುತ್ತೇ ನೆಂದು ಚಿರಕಾಲವಾಗಿ ಧ್ಯಾನಿಸಿ, ಗುರುಸ್ವರೂಪನಾದ ಆಪರಬ್ರಹ್ಮನೇ ತನ್ನ ಅನುಗ್ರ ಹಾರ್ಥವಾಗಿ ಲೀಲೆಯಿಂದ ಪರಮಮಂಗಲಾತ್ಮಕವಾದ ಸರ್ವಾವಯವ ಸಂಪೂ ರ್ಣವಾದ ಸಮಸ್ತಾಭರಣಭೂಷಿತವಾದ ಸಮಸ್ತಪರಿವಾರಸಹಿತವಾದ ಸರ್ವಪು ರುಷಾರ್ಥದಾಯಕವಾದ ಸಮಸ್ತತೇಜೋಮಯವಾದ ಪರಶಿವದಿವ್ಯಮೂರ್ತಿ ರೂ ಪವನ್ನು ಧರಿಸಿಕೊಂಡು ತನ್ನ ಹೃದಯಕಮಲದಲ್ಲಿ ವಾಸಮಾಡಿಕೊಂಡಿರುತ್ತಾ ನೆಂದು ಭಾವಿಸಿ ಮಾನಸಿಕೋಪಚಾರಗಳಿಂದ ಆ ದೇವನನ್ನು ಪೂಜಿಸಿ ಆ ಪರ ಶಿವಮೂರ್ತಿಯು ತಾನೇ ಎಂದು ಭಾವಿಸಿ ೩೮ ಸಾರೆ ಶಿವಪಂಚಾಕ್ಷರೀಮಂತ್ರವನ್ನು ಜಪಿಸಿ ಶ್ರೀ ರೇಣುಕಾದಿಪೂರ್ವಾಚಾರ್ಯರ ಧ್ಯಾನಪೂರ್ವಕವಾಗಿ ದೀಕ್ಷೆಯನ್ನು ಮಾಡಬೇಕು.

## " ಅಜ್ಞಾದೀಕ್ಷಾ ಉಪದೇಶದೀಕ್ಷಾ "

ಅನಂತರ ಆಚಾರ್ಯನು ಪ್ರಾಣಾಯಾಮವನ್ನು ಮಾಡಿ " ಅಸ್ಯ ಕುಮಾರಸ್ಯ ಪಾಶೋಪಕ್ಷಯಾರ್ಥಂಶಾಂಭವೀನಾಮಕಾಜ್ಞಾದೀಕ್ಷಾಮುಪದೇಶ ದೀಕ್ಷಾಂಚ ಕರಿಷ್ಯೇ " ಎಂದು ಸಂಕಲ್ಪ ಮಾಡಿ ವಟುವನ್ನು ಚನ್ನಾಗಿ ನೋಡಿ " ಎಲೈ ಶಿಷ್ಯನೇ ಸದಾಚಾರಗಳನ್ನು ಬಿಟ್ಟು ನಡೆಯಬೇಡ " ಎಂಬ ಆಜ್ಞಾದೀಕ್ಷೆಯಿಂದಲೂ " ಎಲೈ ಶಿಷ್ಯನೇ ಪ್ರಾಚೀನರು ಆಚರಿಸಿದಂತೆ ಆಚರಿಸು " ಎಂಬ ಉಪದೇಶದೀಕ್ಷೆಯಿಂದಲೂ ಉಪದೇಶಿಸಬೇಕು.

## " ಪಂಚಗವ್ಯ ಪ್ರಾಶನ ವಿಧಿ: "

ಅನಂತರ ಆಚಾರ್ಯನು ಪ್ರಾಣಾಯಾಮವನ್ನು ಮಾಡಿ ದೇಶಕಾಲಗಳನ್ನು ಕೀರ್ತಿಸಿ " ಅಸ್ಯಾಂ ಶುಭತಿಥಾವಸ್ಯ ಶಿಷ್ಯಸ್ಯಾತ್ಮಶುದ್ಧ್ಯರ್ಥಂ ಪಂಚಗವ್ಯ ಪ್ರಾಶನಂ ಕಾರಯಿತುಂ ಪಂಚಗವ್ಯ ಸಂಯೋಜನಂ ಕರಿಷ್ಯೇ " ಎಂದು ಸಂಕಲ್ಪವನ್ನು ಮಾಡಿ ಗೋಮಯದಿಂದ ಸಾರಿಸಿದಂಥ ಶುದ್ಧಸ್ಥಾನದಲ್ಲಿ ಅಕ್ಕಿಯನ್ನು ಹರವಿ ಅದರ ಮೇಲೆ ಪೂರ್ವಪಶ್ಚಿಮವಾಗಿ ಹಾಗೂ ಉತ್ತರ ದಕ್ಷಿಣವಾಗಿ ನಾಲ್ಕು ನಾಲ್ಕು ರೇಖೆಗಳನ್ನು ಬರೆಯಬೇಕು. ಹೀಗೆ ಬರೆಯೋಣದರಿಂದ ೯ ಮನೆಗಳಾಗುತ್ತವೆ. ಮಧ್ಯಮನೆಯಲ್ಲಿ ಹಾಲನ್ನು, ಪೂರ್ವದಿಕ್ಕಿನ ಮನೆಯಲ್ಲಿ ಮೊಸರನ್ನು, ದಕ್ಷಿಣ ದಿಕ್ಕಿನಮನೆಯಲ್ಲಿ ತುಪ್ಪವನ್ನು, ಪಶ್ಚಿಮ ಮನೆಯಲ್ಲಿ ಗೋಮಯವನ್ನು, ಉತ್ತರ ಮನೆಯಲ್ಲಿ ಗೋಮೂತ್ರವನ್ನು, ಈಶಾನ್ಯ ಮನೆಯಲ್ಲಿ ದರ್ಭೋದಕವನ್ನು, ಒಂದೊಂದು ತಾಲಿಯಲ್ಲಿಟ್ಟು,

" ಓಂ ತತ್ಸವಿತುರ್ವರೇಣ್ಯಂ ಭರ್ಗೋದೇವಸ್ಯ ಧೀಮಹಿ | ಧಿಯೋ ಯೋ ನಃಪ್ರಚೋದಯಾತ್ "

ಈ ಮಂತ್ರದಿಂದ ಗೋಮೂತ್ರವನ್ನೂ,

" ಗಂಧದ್ವಾರಾಂದುರಾಧರ್ಷಾಂನಿತ್ಯ ಪುಷ್ಟಾಂಕರೀಷಿಣೀಂ । ಈಶ್ವ

ರೀಂಸರ್ವೇಭೂತಾನಾಂ ತಾಮಿಹೋಪಾಹ್ವಯೇ ಶ್ರಿಯಂ ”

ಈ ಮಂತ್ರದಿಂದ ಗೋಮಯವನ್ನೂ,

“ ಅಪ್ಯಾಯ ಸ್ವಸಮೇತು ತೇ ವಿಶ್ವತಃ ಸೋಮವೃಷ್ಣ್ಯಂ । ಭವಾವಾಜಸ್ಯ ಸಂಗಥೇ ”

ಈ ಮಂತ್ರದಿಂದ ಕ್ಷೀರವನ್ನೂ,

“ ದಧಿಕ್ರಾವ್ಣೋ ಅಕಾರಿಷಂ ಜಿಷ್ಣೋರಶ್ವಸ್ಯ ವಾಜಿನಃ । ಸುರಭಿನೋ ಮುಖಾಕರತ್ಪ್ರಣಆಯೂಂಷಿ ತಾರಿಷತ್ ॥

ಈ ಮಂತ್ರದಿಂದ ಮೊಸರನ್ನೂ,

“ ಶುಕ್ರಮಸಿ ಜ್ಯೋತಿರಸಿ ತೇಜೋಸಿ ದೇವೋವಃಸವಿತೋತ್ಪುನಾತ್ವಚ್ಛಿದ್ರೇಣ ಪವಿತ್ರೇಣ ವಸೋಃಸೂರ್ಯಸ್ಯರಶ್ಮಿಭಿಃ ”

ಈ ಮಂತ್ರದಿಂದ ತುಪ್ಪವನ್ನೂ,

“ ದೇವಸ್ಯ ತ್ವಾಪ್ರಸವೇಶ್ವಿನೋ ರ್ಬಾಹುಭ್ಯಾಂಪೂಷ್ಣೋ ಹಸ್ತಾಭ್ಯಾಮಾದದೇ ”

ಈ ಮಂತ್ರದಿಂದ ದರ್ಭೋದಕವನ್ನು, ಅಭಿಮಂತ್ರಿಸಿ ಆ ತಾಲಿಯನ್ನು ಪಂಚೋಪಚಾರಗಳಿಂದ ಪೂಜಿಸಿ ಮಂತ್ರೊಂದು ಪಾತ್ರೆಯಲ್ಲಿ ಒಂದುದರ್ಭೆಯತುಂಡನ್ನು ಓಂಕಾರವನ್ನುಚ್ಚರಿಸುತ್ತಹಾಕಿ ಮೇಲೆ ಹೇಳಿದ ಗಾಯತ್ರೀಮಂತ್ರದಿಂದ (೧ಪಲ) ೩ ತೊಲೆ ೩.೨ ಗುಂಜಿ ತೂಕ ಗೋಮೂತ್ರವನ್ನೂ, “ ಗಂಧದ್ವಾರಾಂ ,, ಎಂಬ ಮಂತ್ರದಿಂದ ಅಂಗುಷ್ಠದ ಅರ್ಧದಷ್ಟು ಗೋಮಯವನ್ನೂ, “ ಅಪ್ಯಾಯಸ್ವ ,, ಎಂಬ ಮಂತ್ರದಿಂದ ೨೩ ತೊಲೆ ೩.೨ ಗುಂಜಿಹಾಲನ್ನೂ, “ ದಧಿಕ್ರಾವ್ಣೋ ,, ಎಂಬ ಮಂತ್ರದಿಂದ ಸ್ವಲ್ಪಮೊಸರನ್ನೂ, “ ಶುಕ್ರಮಸಿ ,, ಎಂಬಮಂತ್ರದಿಂದ ತುಪ್ಪವನ್ನೂ, “ ದೇವಸ್ಯತ್ವಾ ,, ಎಂಬಮಂತ್ರದಿಂದ ದರ್ಭೋದಕವನ್ನೂ ಹಾಕಿ ಓಂಕಾರವನ್ನುಚ್ಚರಿಸುತ್ತ ಅವುಗಳನ್ನು ಮಿಶ್ರಮಾಡಬೇಕು ಆಮೇಲೆ ಆಚಾರ್ಯನು “ ಅಸ್ಯಕುಮಾರಸ್ಯಾಂತಃ ಶೋಧನಂಪಂಚಗವ್ಯೇನ ಕರೋಮಿ ,, ಎಂದು ಸಂಕಲ್ಪವನ್ನು ಮಾಡಿ “ ಯತ್ತ್ವಗಸ್ಥಿಗತಂಪಾಪಂದೇಹೇತಿಷ್ಠತಿ ಮಾಮಕೇ । ಪ್ರಾಶನಂಪಂಚಗವ್ಯಸ್ಯ ದಹತ್ವಗ್ನಿರಿವೇಂಧನಂ ॥ ಹೀಗೆ ವಟುವಿನಿಂದ ಅನ್ನಿಸಿ ಪಂಚಗವ್ಯಪ್ರಾಶನವನ್ನು ಮಾಡಿಸಬೇಕು.

## " ಸ್ವಸ್ತಿಕಾರೋಹಣದೀಕ್ಷಾ"

ಆಮೇಲೆ ಆಚಾರ್ಯನು ಪ್ರಾಣಾಯಾಮವನ್ನು ಮಾಡಿ " ಅಸ್ಯಾಂ ಶುಭ ತಿಥಾವಸ್ಯ ಕುಮಾರಸ್ಯ ಮಾಂಸಪಿಂಡನಿವೃತ್ತಿದ್ವಾರಾ ಮಂತ್ರಪಿಂಡಂ ಕರ್ತುಂ ಸ್ವಸ್ತಿಕಾರೋಹಣ ದೀಕ್ಷಾಂ ಕರೋಮಿ । ಆದೌ ಭೂತಶುದ್ಧಿಂ ಕರೋಮಿ ,, ಎಂದು ಸಂಕಲ್ಪವನ್ನು ಮಾಡಿ ಸ್ವಸ್ತಿಕಮಂಡಲವನ್ನು ರಚಿಸಿ ದರ್ಭಾಸನದ ಮೇಲೆ ವಟುವನ್ನು ಉತ್ತರಾಭಿಮುಖನನ್ನಾಗಿ ಕುಳ್ಳಿರಿಸಿ ದಿವ್ಯದೃಷ್ಟಿಯಿಂದ ಅವನನ್ನು ನೋಡಿ ಅವನ ಹೃದಯಕಮಲದಲ್ಲಿದ್ದ ಚೈತನ್ಯವನ್ನು ಭಾವನೆಯಿಂದ ತನ್ನಲ್ಲಿ ತಂದುಕೊಂಡು ಪ್ರಾಣಾಯಾಮವನ್ನು ಮಾಡಿ ಆ ದೇಹದಲ್ಲಿರತಕ್ಕ ಅಶುದ್ಧವಾಯುವನ್ನು ರೇಚಕ ಪ್ರಾಣಾಯಾಮ ಪೂರ್ವಕವಾಗಿ " ಓಂಹ್ರಃ ಅಸ್ತ್ರಾಯಫಟ್ ,, ಎಂಬ ಮಂತ್ರದಿಂದ ಹೊರಗೆ ಹಾಕಿ ಹೊರಗಿನ ಶುದ್ಧವಾಯುವನ್ನು ಉದರದಲ್ಲಿ ತುಂಬಿ ಎರಡು ಪಾದಾಂಗುಷ್ಠಗಳಿಂದ ಬ್ರಹ್ಮರಂಧ್ರದವರೆಗೆ ಏಕಾಕಾರವಾದ, ಅಧೋಮುಖಗಳಾದ ಕಮಲಗಳ ಮೊಗ್ಗೆಗಳಿಂದ ಕೂಡಿದ, ಶರೀರದ ಮಧ್ಯದಲ್ಲಿ ಅತಿಸೂಕ್ಷ್ಮವಾದ, ಮಿಂಚಿನಂತೆ ಪ್ರಕಾಶಮಾನವಾದ ಮಧ್ಯದಲ್ಲಿ ಅಮೃತಯುಕ್ತವಾದ ಸುಷುಮ್ನಾನಾಡಿಯನ್ನು ಭಾವಿಸಿ, ಹೃದಯ ಕಂಠ ತಾಲು ಭ್ರೂಮಧ್ಯ ಬ್ರಹ್ಮರಂಧ್ರಗಳಲ್ಲಿ ಅಧೋಮುಖಗಳಾಗಿದ್ದ ಕಮಲಗಳಮೊಗ್ಗೆಗಳನ್ನು ಪೂರಕ ಕುಂಭಕ ರೇಚಕ ಪ್ರಾಣಾಯಾಮಗಳಿಂದ ಅರಳಿದಂಥವುಗಳನ್ನಾಗಿಯೂ ಊರ್ಧ್ವಮುಖಗಳಾಗಿ ಮಾಡಿದವುಗಳನ್ನಾಗಿಯೂ ಭಾವಿಸಿ ಮೂಲಾಧಾರಪ್ರದೇಶದಲ್ಲಿ ದೀಪಶಿಖೆಯಂತೆ ಪ್ರಕಾಶಮಾನವಾದಂಥ " ಹುಂ ,, ಎಂಬ ಅಕ್ಷರವನ್ನು ಗುಪ್ತವಾಗಿ ಉಚ್ಚಾರಮಾಡುವದರಿಂದ ಅದನ್ನು ಮೇಲಕ್ಕೆ ಹೋಗುವಂಥಾದ್ದನ್ನಾಗಿ ಧ್ಯಾನಿಸಿ ಆ ಹುಂಕಾರದಿಂದ ಹೃದಯಕಂಠಾದಿ ಪಂಚಸ್ಥಾನಗಳಲ್ಲಿರತಕ್ಕ ಕಮಲದೇಂಟಿನ ಗಂಟುಗಳನ್ನು ಭಿನ್ನವಾದವುಗಳನ್ನಾಗಿ ಭಾವಿಸಿ ಆ ಹುಂಕಾರವನ್ನು ದಕ್ಷಿಣನಾಡಿಯಿಂದ ವಾಯುವಿನೊಡನೆ ಹೊರಗೆ ಬಿಡಬೇಕು. ಮತ್ತು ಆ ಹುಂಕಾರವನ್ನೇ ಮೂಲಾಧಾರದಲ್ಲಿ ಧ್ಯಾನಿಸುವವನಾಗಿ ಪೂರಕವಾಯುವಿನಿಂದ ತಡೆದು ತನ್ನ ಶರೀರಕ್ಕೆ ವ್ಯಾಪಕ ಚೈತನ್ಯನಾಗಿ ಹೃದಯ ಕಮಲವನ್ನಾಶ್ರಯಿಸಿದ್ದು ಶಬ್ದಸ್ಪರ್ಶರೂಪರಸಗಂಧ ಮನೋಬುದ್ಧ್ಯಹಂಕಾರಗಳಿಂದ ಪರ್ಯಾಪ್ತ

ಕ ರೂಪ ಸೂಕ್ಷ್ಮದೇಹಗಳಿಂದ ಕೂಡಿರುವ ಜೀವನನ್ನು ಆ ಪುರ್ಯಷ್ಟಕದಿಂದ ತೆಗೆದುಕೊಂಡು ಪ್ರಕಾಶಮಾನ ತಾರಕಾಕಾರವಾದ ಅತಿ ಸೂಕ್ಷ್ಮವಾದ " ಹ್ರಾಂ ಎಂಬ ಹೃದಯ ಬೀಜಾಕ್ಷರವನ್ನು ಸಂಪುಟಿತವನ್ನಾಗಿ ಮಾಡಿ " ಹುಂ ,, ಕಾರವನ್ನು ಮಸ್ತಕದಲ್ಲಿ ಕುಳ್ಳಿರಿಸಿ ಕುಂಭಕ ಪ್ರಾಣಾಯಾಮದಿಂದ ವಾಯುವನ್ನು ಊರ್ಧ್ವದಲ್ಲಿ ನಿಲ್ಲಿಸಿ * ಸಂಹಾರಮುದ್ರೆಯಿಂದ ಆ ಜೀವನನ್ನು ತೆಗೆದುಕೊಂಡು ಬ್ರಹ್ಮರಂಧ್ರದವರೆಗೆ ಒಯ್ದು ಅದರ ಮೇಲ್ಭಾಗದಲ್ಲಿರತಕ್ಕ ಪರಶಿವನಲ್ಲಿ ಯೋಜಿಸಬೇಕು.

ಬ್ರಹ್ಮಹತ್ಯಾಶಿರಸ್ಕಂಚ ಸ್ವರ್ಣಸ್ತೇಯಭುಜದ್ವಯಂ !<br>
ಸುರಾಪಾನಹೃದಾಯುಕ್ತಂ ಗುರುತಲ್ಪಕಟಿದ್ವಯಂ ||<br>
ತತ್ಸಂಯೋಗಿಸದ ದ್ವಂದ್ವಮಂಗಪ್ರತ್ಯಂಗಪಾತಕಂ |<br>
ಉಪಪಾತಕ ರೋಮಾಣಿ ಪಿಂಗ ಭ್ರೂಶ್ಮಶ್ರುಲೋಚನಂ ||<br>
ಅಧೋಮುಖಂಕೃಷ್ಣವರ್ಣಮಂಗುಷ್ಠಪರಿಮಾಣಕಂ |<br>
ಖಡ್ಗಚರ್ಮಧರಂ ಪಾಪಂ ವಾಮಕುಕ್ಷೌ ವಿಚಿಂತಯೇತ್ ||

ಎಂದು ಪಾಪ ಪುರುಷನನ್ನು ಉದರದ ಎಡಗಡೆಯಲ್ಲಿ ಭಾವಿಸಿ " ಯಂ ,, ಎಂಬವಾಯುಬೀಜಾಕ್ಷರವನ್ನುಚ್ಚರಿಸಿ ಅದರಿಂದುತ್ಪನ್ನವಾದ ವಾಯುವಿನಿಂದ ಆ ಪಾಪ ಪುರುಷನನ್ನು ಒಣಗಿಸಿ ಪುನಃ " ರಂ ,, ಎಂಬ ಅಗ್ನಿಬೀಜಾಕ್ಷರವನ್ನುಚ್ಚರಿಸಿ ಅದರಿಂದುತ್ಪನ್ನವಾದ ಅಗ್ನಿಯಿಂದ ಅವನನ್ನು ಸುಟ್ಟು ಬೂದಿಮಾಡಿ ಪುನಃ " ಯಂ ,, ಎಂಬವಾಯುಬೀಜಾಕ್ಷರವನ್ನುಚ್ಚರಿಸಿ ಅದರಿಂದುತ್ಪನ್ನವಾದ ವಾಯುವಿನಿಂದ ಆ ಬೂದಿಯನ್ನು ದಕ್ಷಿಣನಾಸಾಪುಟದಿಂದ ಹೊರಗೆ ಹಾಕಿ " ವಂ ,, ಎಂಬ ಜಲಬೀಜಾಕ್ಷರವನ್ನುಚ್ಚರಿಸಿ ಅದರಿಂದುತ್ಪನ್ನವಾ

---

* ಸಂಹಾರ ಮುದ್ರೆಯು— ಎಡಗೈಯ್ಯನ್ನು ಅಧೋಮುಖವಾಗಿ ಮಾಡಿ ಅದರಮೇಲೆ ಬಲಗೈಯ್ಯನ್ನು ಮೇಲ್ಮುಖವಾಗಿಟ್ಟು ಎರಡೂ ಹಸ್ತಗಳನ್ನು ಒಂದಕ್ಕೊಂದು ಸೇರಿಸಿ ಸುತ್ತರಿಸುವದು.

ದ ಅಮೃತಧಾರೆಯಿಂದ ಶರೀರವನ್ನು ನಿಷ್ಕಲ್ಮಷವನ್ನಾಗಿ ತೊಳೆದು ಶುದ್ಧಿಯನ್ನು ಮಾಡಿ ಪೃಥಿವ್ಯಾದಿಭೂತಶುದ್ಧಿಯನ್ನು ಮಾಡಬೇಕು.

## "ಭೂತ ಶುದ್ಧಿಃ"

ಪಾದದಿಂದಾರಂಭಿಸಿ ಮೊಣಕಾಲ ಪರ್ಯಂತಪ್ರದೇಶದಲ್ಲಿ ಚತುಷ್ಕೋಣವುಳ್ಳ ಪೀತವರ್ಣವುಳ್ಳ ಕಠಿಣ ಸ್ವಭಾವವುಳ್ಳ ವಜ್ರಲಾಂಛಿತವಾದ "**ಲಂ ಹ್ರಾಂ** ಎಂಬ ಪೃಥ್ವೀ ಬೀಜ ಸಹಿತ ಹೃದಯ ಬೀಜಾಕ್ಷರದಿಂದ ಯುಕ್ತವಾದ ಅಧಿನಾಯಕನಾದ ಸದ್ಯೋಜಾತಮೂರ್ತಿಯಿಂದ ಅಧಿಷ್ಠಿತವಾದ ಕಾರಣೇಶ್ವರನಾದ ಬ್ರಹ್ಮನಿಂದ ಯುಕ್ತವಾದ ಪಾರ್ಥಿವ ಮಂಡಲವನ್ನು "ನಿವೃತ್ತಿಕಲಾರೂಪಂ ಭಾವಯಾಮಿ" ಎಂದು ಭಾವಿಸಿ "**ಹ್ರಾಂನಿವೃತ್ತಿಕಲಾಯೈ ಹುಂಫಟ್**" ಎಂಬ ಮಂತ್ರವನ್ನುಚ್ಚರಿಸಿ ಪ್ರಾಣವಾಯುವನ್ನು ಪೂರಕಪ್ರಾಣಾಯಾಮದಿಂದ ಸುಷುಮ್ನಾನಾಡಿಯಿಂದ ರೇಚಕವನ್ನು ಮಾಡಬೇಕು. ಈ ಪ್ರಕಾರವಾಗಿ ೫ * **ಉದ್ಘಾತ**ಗಳಿಂದ ಪೃಥ್ವಿಯಲ್ಲಿರತಕ್ಕ ಗಂಧ ರಸ ರೂಪ ಸ್ಪರ್ಶ ಶಬ್ದಗಳೆಂಬ ಗುಣಗಳನ್ನು ಹೊರಗೆ ಹಾಕಿ ತನಗೆ ವಿರುದ್ಧವಾದ ವಾಯುವಿನಿಂದ ತಿರಸ್ಕೃತವಾದ ಪೃಥ್ವಿಯನ್ನು ನಿವೃತ್ತಿಕಲಾ ಸ್ವರೂಪವನ್ನಾಗಿ ಭಾವಿಸಬೇಕು.

ಆ ಮೇಲೆ ಮೊಣಕಾಲಿಂದ ನಾಭಿಯ ಪರ್ಯಂತ ಪ್ರದೇಶದಲ್ಲಿ ಅರ್ಧ ಚಂದ್ರಾಕಾರವಾದ ಶುಭ್ರವಾದ ಶ್ವೇತಪದ್ಮಲಾಂಛಿತವಾದ ದ್ರವಸ್ವಭಾವವುಳ್ಳ "**ವಂ ಹ್ರಿಂ**" ಎಂಬ ಜಲಬೀಜಸಹಿತ ಶಕ್ತಿಬೀಜದಿಂದ ಯುಕ್ತವಾದ ಅಧಿನಾಯಕನಾದ ವಾಮದೇವ ಮೂರ್ತಿಯಿಂದ ಅಧಿಷ್ಠಿತವಾದ ಕಾರಣೇಶ್ವರನಾದ ವಿಷ್ಣುವಿನಿಂದ ಯುಕ್ತವಾದ ಜಲಮಂಡಲವನ್ನು "ಪ್ರತಿಷ್ಠಾ ಕಲಾರೂಪಂ ಭಾವಯಾಮಿ" ಎಂದು ಭಾವಿಸಿ "**ಹ್ರಿಂಪ್ರತಿಷ್ಠಾಕಲಾಯೈಹುಂಫಟ್**" ಎಂಬ

---

* ಉದ್ಘಾತ = ೧೨ ಮಾತ್ರೆಗಳವರೆಗೆ ಪೂರಕವನ್ನು ಮಾಡಿ ೧೨ ಮಾತ್ರೆಗಳವರೆಗೆ ಕುಂಭಕವನ್ನು ಮಾಡಿ ಪುನಃ ೧೨ ಮಾತ್ರೆಗಳವರೆಗೆ ರೇಚಕವನ್ನು ಮಾಡುವದಕ್ಕೆ ೧ ಉದ್ಘಾತವೆನ್ನುತ್ತಾರೆ.

ಮಂತ್ರವನ್ನುಚ್ಚರಿಸಿ ಪ್ರಾಣವಾಯುವನ್ನು ಪೂರಕದಿಂದ ಸುಷುಮ್ನಾನಾಡೀದ್ವಾ ರಾ ಬ್ರಹ್ಮರಂಧ್ರದವರೆಗೆ ಏರಿಸಿ ಅಲ್ಲಿ ಕುಂಭಕವನ್ನು ಮಾಡಿ ಪುನಃ ದಕ್ಷಿಣ ನಾಡಿಯಿಂದ ರೇಚಕವನ್ನು ಮಾಡಬೇಕು. ಈ ಪ್ರಕಾರ ನಾಲ್ಕು ಉದ್ಘಾತಗಳಿಂದ ಜಲದಲ್ಲಿರತಕ್ಕ ರಸರೂಪ ಸ್ಪರ್ಶಶಬ್ದಗಳೆಂಬ ಗುಣಗಳನ್ನು ಹೊರಗೆ ಹಾಕಿ ತನ ಗೆ ವಿರುದ್ಧವಾದ ಅಗ್ನಿಯಿಂದ ತಿರಸ್ಕೃತವಾದ ಜಲವನ್ನು ಪ್ರತಿಷ್ಠಾ ಕಲಾಸ್ವ ರೂಪವನ್ನಾಗಿ ಭಾವಿಸಬೇಕು.

ಆ ಮೇಲೆ ನಾಭಿಮೊದಲ್ಗೊಂಡು ಕಂಠಪರ್ಯಂತ ಪ್ರದೇಶದಲ್ಲಿ ತ್ರಿಕೋ ಣವಾದ ರಕ್ತವರ್ಣವಾದ ಸ್ವಸ್ತಿಕಲಾಂಛಿತವಾದ ಪಚನಸ್ವಭಾವವುಳ್ಳ " ರಂ ಹ್ರೂಂ ,, ಎಂಬ ಅಗ್ನಿಬೀಜಸಹಿತ ಶಿಖಾಬೀಜದಿಂದ ಯುಕ್ತವಾದ ಅಧಿನಾಯ ಕನಾದ ಅಘೋರಮೂರ್ತಿಯಿಂದ ಅಧಿಷ್ಠಿತವಾದ ಕಾರಣೇಶ್ವರನಾದ ರುದ್ರನಿಂ ದ ಯುಕ್ತವಾದ ಅಗ್ನಿಮಂಡಲವನ್ನು " ವಿದ್ಯಾಕಲಾರೂಪಂ ಭಾವಯಾಮಿ ,, ಎಂದು ಭಾವಿಸಿ " **ಹ್ರೂಂವಿದ್ಯಾಕಲಾಯೈಹುಂಫಟ್** ,, ಎಂಬಮಂತ್ರವನ್ನು ಚ್ಚರಿಸಿ ಪ್ರಾಣವಾಯುವನ್ನು ಪೂರಕದಿಂದ ಸುಷುಮ್ನಾನಾಡೀದ್ವಾರಾ ಬ್ರಹ್ಮರಂ ಧ್ರದವರೆಗೆ ಏರಿಸಿ ಅಲ್ಲಿ ಕುಂಭಕವನ್ನು ಮಾಡಿ ಪುನಃ ದಕ್ಷಿಣನಾಡಿಯಿಂದ ರೇ ಚಕವನ್ನು ಮಾಡಬೇಕು. ಈ ಪ್ರಕಾರವಾಗಿ ೩ ಉದ್ಘಾತಗಳಿಂದ ಅಗ್ನಿಯಲ್ಲಿರತ ಕ್ಕ ರೂಪ ಸ್ಪರ್ಶಶಬ್ದಗಳೆಂಬ ಗುಣಗಳನ್ನು ಹೊರಗೆ ಹಾಕಿ ತನಗೆ ವಿರುದ್ಧವಾ ದ ಜಲದಿಂದ ತಿರಸ್ಕೃತವಾದ ಅಗ್ನಿಯನ್ನು ವಿದ್ಯಾಕಲಾರೂಪವನ್ನಾಗಿ ಭಾವಿ ಸಬೇಕು.

ಆ ಮೇಲೆ ಕಂಠದಿಂದ ಭ್ರೂಮಧ್ಯ ಪರ್ಯಂತ ಪ್ರದೇಶದಲ್ಲಿ ಷಟ್ಕೋಣ ವಾದ ಕೃಷ್ಣವರ್ಣವಾದ ಷಡ್ಬಿಂದುಲಾಂಛಿತವಾದ ಚಲನಸ್ವಭಾವವುಳ್ಳ " ಯಂ ಹೈಂ ,, ಎಂಬವಾಯುಬೀಜಸಹಿತ ಕವಚಬೀಜದಿಂದ ಯುಕ್ತವಾದ ಅಧಿನಾ ಯಕನಾದ ತತ್ಪುರುಷಮೂರ್ತಿಯಿಂದ ಅಧಿಷ್ಠಿತವಾದ ಕಾರಣೇಶ್ವರನಾದ ಈ ಶ್ವರನಿಂದ ಯುಕ್ತವಾದ ವಾಯುಮಂಡಲವನ್ನು " ಶಾಂತಿಕಲಾರೂಪಂಭಾವಯಾ ಮಿ ,, ಎಂದುಭಾವಿಸಿ " **ಹೈಂಶಾಂತಿಕಲಾಯೈಹುಂಫಟ್** ,, ಎಂಬ ಮಂತ್ರ ವನ್ನುಚ್ಚರಿಸಿ ಪ್ರಾಣವಾಯುವನ್ನು ಪೂರಕದಿಂದ ಸುಷುಮ್ನಾ ನಾಡೀದ್ವಾರಾ

ಬ್ರಹ್ಮರಂಧ್ರದವರೆಗೆ ಏರಿಸಿ ಅಲ್ಲಿಕುಂಬಕವನ್ನು ಮಾಡಿ ಪುನಃ ದಕ್ಷಿಣನಾಡಿಯಿಂ ದ ರೇಚಕವನ್ನು ಮಾಡಬೇಕು. ಈಪ್ರಕಾರವಾಗಿ ೨ ಉದ್ಘಾತಗಳಿಂದ ವಾಯು ವಿನಲ್ಲಿರತಕ್ಕ ಸ್ಪರ್ಶಶಬ್ದಗಳೆಂಬ ಗುಣಗಳನ್ನು ಹೊರಗೆ ಹಾಕಿ ತನಗೆ ವಿರುದ್ಧವಾ ದ ಪೃಥ್ವಿಯಿಂದ ತಿರಸ್ಕೃತವಾದ ವಾಯುವನ್ನು ಶಾಂತಿಕಲಾರೂಪವನ್ನಾಗಿ ಭಾ ವಿಸಬೇಕು.

ಆ ಮೇಲೆ ಭ್ರೂಮಧ್ಯದಿಂದ ಬ್ರಹ್ಮರಂಧ್ರಪರ್ಯಂತ ಪ್ರದೇಶದಲ್ಲಿ ಗೋ ಲಾಕಾರವಾದ ಧೂಮ್ರವರ್ಣವಾದ ಬಿಂದು ಶಕ್ತಿಲಾಂಛಿತವಾದ ಆಕಾಶಸ್ವಭಾ ವವುಳ್ಳ " ಹಂ ಹ್ರಃ ,, ಎಂಬ ಆಕಾಶಬೀಜಸಹಿತ ಅಸ್ತ್ರಬೀಜದಿಂದ ಯುಕ್ತವಾ ದ ಅಧಿನಾಯಕನಾದ ಈಶಾನಮೂರ್ತಿಯಿಂದ ಅಧಿಷ್ಠಿತವಾದ ಕಾರಣೇಶ್ವರನಾ ದ ಸದಾಶಿವನಿಂದ ಯುಕ್ತವಾದ ಆಕಾಶಮಂಡಲವನ್ನು " ಶಾಂತ್ಯತೀತ ಕಲಾ ರೂಪಂಭಾವಯಾಮಿ ,, ಎಂದು ಭಾವಿಸಿ " ಹ್ರಃಶಾಂತ್ಯತೀತ ಕಲಾಯೈಹುಂ ಫಟ್ ,, ಎಂಬ ಮಂತ್ರವನ್ನುಚ್ಚರಿಸಿ ಪ್ರಾಣವಾಯುವನ್ನು ಪೂರಕದಿಂದ ಸುಷು ಮ್ನಾನಾಡೀದ್ವಾರಾ ಬ್ರಹ್ಮರಂಧ್ರದವರೆಗೆ ಮೇಲಕ್ಕೇರಿಸಿ ಪುನಃ ದಕ್ಷಿಣನಾಡಿ ಯಿಂದ ರೇಚಕವನ್ನು ಮಾಡಬೇಕು. ಈಪ್ರಕಾರವಾಗಿ ಒಂದು ಉದ್ಘಾತದಿಂದ ಆಕಾಶದಲ್ಲಿರುವ ಶಬ್ದಗುಣವನ್ನು ಹೊರಗೆ ಹಾಕಿ ನಿತ್ಯತ್ವವ್ಯಾಪಕತ್ವಾದಿ ಯುಕ್ತಪರ ಮಾಕಾಶದಿಂದ ತಿರಸ್ಕೃತವಾದ ಆಕಾಶವನ್ನು ಶಾಂತ್ಯತೀತ ಕಲಾರೂಪವನ್ನಾಗಿ ಭಾ ವಿಸಬೇಕು.

ಆ ಮೇಲೆ ಶಬ್ದಸ್ಪರ್ಶರೂಪ ರಸಗಂಧ ಬುದ್ಧ್ಯಹಂಕಾರ ಮನೋರೂಪ ಪುರ್ಯಷ್ಟಕಾತ್ಮಕ ಸೂಕ್ಷ್ಮಶರೀರ ಶುದ್ಧ್ಯರ್ಥವಾಗಿ ಹೃದಯ ಕಂಠ ತಾಲು ಭ್ರೂ ಮಧ್ಯ ಬ್ರಹ್ಮರಂಧ್ರಸ್ಥಾನಗಳಲ್ಲಿದ್ದಂಥ ಬ್ರಹ್ಮವಿಷ್ಣುರುದ್ರ ಈಶ್ವರ ಸದಾಶಿವರೆಂಬ ಕಾರಣಪುರುಷರೊಳಗೆ " ಬ್ರಹ್ಮಣಿ ಶಬ್ದಸ್ಪರ್ಶೌ ಪ್ರವಿಲಾಪಯಾಮಿ, ರಸಂ ವಿಷ್ಣೌ ಪ್ರವಿಲಾಪಯಾಮಿ, ರೂಪಂ ರುದ್ರೇ ಪ್ರವಿಲಾಪಯಾಮಿ, ಬುದ್ಧ್ಯಹಂಕಾರಾವೀಶ್ವರೇ ಪ್ರವಿಲಾಪಯಾಮಿ, ಮನೋಗಂಧೌ ಸದಾಶಿವೇ ಪ್ರವಿಲಾಪಯಾಮಿ, ಈ ಪ್ರಕಾ ರವಾಗಿ ಸೂಕ್ಷ್ಮಶರೀರಾಂಶಗಳನ್ನು ಶುದ್ಧಿಗಳನ್ನು ಪ್ರವಿಲಾಪನವಮಾಡಬೇಕು.

ಆ ಮೇಲೆ ಸ್ಥೂಲಶರೀರಶುದ್ಧಿಗಾಗಿ ತನ್ನ ಶರೀರದಲ್ಲಿ ಪಾದಪೊದಲ್ಗೊಂಡುಮ ಸ್ತಕಪರ್ಯಂತವಾದ ಪಂಚಸ್ಥಾನಗಳಲ್ಲಿದ್ದ ಪೃಥಿವ್ಯಾದಿಪಂಚಭೂತಗಳನ್ನು ಮೊದಲು ಹೇಳಿದಂತೆ ಆಕಾರ ರೂಪಾದಿಗಳುಳ್ಳವುಗಳನ್ನಾಗಿ ಭಾವಿಸಿ “ ಪೃಥ್ವೀಮಪ್ಸು ಪ್ರವಿಲಾಪಯಾಮಿ, ಅಪೋಽಗ್ನೌ ಪ್ರವಿಲಾಪಯಾಮಿ, ಅಗ್ನಿಂವಾಯೌಪ್ರವಿಲಾಪಯಾಮಿ. ವಾಯುಮಾಕಾಶೇ ಪ್ರವಿಲಾಪಯಾಮಿ, ಆಕಾಶಮಹಂಕಾರೇ ಪ್ರವಿಲಾಪಯಾಮಿ, ಅಹಂಕಾರು ಮಹತ್ತತ್ವೇ ಪ್ರವಿಲಾಪಯಾಮಿ, ಮಹತ್ತತ್ವಂ ಪ್ರಕೃತಿಸ್ವರೂಪಮಾಯಾಯಾಂ ಪ್ರವಿಲಾಪಯಾಮಿ, ಮಾಯಾಂ ನಿತ್ಯಶುದ್ಧಬುದ್ಧಮುಕ್ತಸ್ವರೂಪೇ ಸ್ವಾತ್ಮಪ್ರಕಾಶೇ ಸತ್ಯಜ್ಞಾನಾನಂದಲಕ್ಷಣೇ ಪರಮಕಾರಣೇ ಬ್ರಹ್ಮಣಿ ಪ್ರವಿಲಾಪಯಾಮಿ ,, ಎಂದುಲಯಗೊಳಿಸಬೇಕು.

ಆ ವೇಲೆ ಆಚಾರ್ಯನು ಆವಟುವನ್ನು ದಿವ್ಯದೃಷ್ಟಿಯಿಂದ ನೋಡುತ್ತ ತನ್ನಲ್ಲಿರತಕ್ಕ ಆ ಶಿಷ್ಯನ ಚೈತನ್ಯವನ್ನು ಪುನಃ ಆ ಶಿಷ್ಯನಲ್ಲಿಯೇ ನೆಲೆಗೊಳಿಸಬೇಕು. ಆಗೈ ಆ ಶಿಷ್ಯನು “ ಶುದ್ಧೋಽಹಂ ಮುಕ್ತೋಽಹಂ ಸಚ್ಚಿದಾನಂದಸ್ವರೂಪೋಽಹಮಸ್ಮಿ ,, ಎಂದು ಚಿರಕಾಲವಾಗಿ ಭಾವಿಸಬೇಕು. ಅನಂತರ ಆಚಾರ್ಯನು ಶಿಷ್ಯನ ಬ್ರಹ್ಮರಂಧ್ರಗತ ಸಹಸ್ರದಲ ಕಮಲಕರ್ಣಿಕೆಯ ಮಧ್ಯದಲ್ಲಿದ್ದ ಪರಮಾತ್ಮನೊಡನೆ ಏಕೀಭೂತನಾದ ಜೀವಾತ್ಮನನ್ನು “ ಸೋಽಹಂ ,, ಎಂದು * ಅಂಕುಶಮುದ್ರೆಯಿಂದ ಸುಷುಮ್ನಾನಾಡೀ ಮಾರ್ಗದಿಂದ ತಂದು ಶಿಷ್ಯನ ಹೃದಯಕಮಲದಲ್ಲಿ ಸ್ಥಾಪಿಸಬೇಕು.

## ,, ಜೀವಾತ್ಮ ಸ್ಥಾಪನವಿಧಿಃ ,,

ಓಂ ಅಸ್ಯ ಶ್ರೀಪ್ರಾಣಪ್ರತಿಷ್ಠಾಪನ ಮಂತ್ರಸ್ಯ ಬ್ರಹ್ಮವಿಷ್ಣುಮಹೇಶ್ವರಾ ಋಷಯಃ । ಋಗ್ಯಜುಃಸಾಮಾಥರ್ವಣಾಶ್ಛಂದಾಂಸಿ । ಸಕಲಜಗತ್ಸೃಷ್ಟಿಸ್ಥಿತಿ

---

* ಅಂಕುಶಮುದ್ರೆಯು— ಬಲಹಸ್ತದ ಮಧ್ಯ ಬೆರಳನ್ನು ಚಾಚಿ ತರ್ಜನೀಬೆರಳನ್ನು ಮಧ್ಯಬೆರಳಿನ ಮಧ್ಯಕ್ಕೆ ಬರುವಹಾಗೆ ಬಾಗಿಸಬೇಕು.

ಸಂಹಾರಕಾರಿಣೀಪ್ರಾಣಶಕ್ತಿರ್ದೇವತಾ | ಆಂ ಬೀಜಂ | ಹ್ರೀಂ ಶಕ್ತಿಃ | ಹ್ರೂಂ ಕೀಲಕಂ | ಪ್ರಾಣಪ್ರತಿಷ್ಠಾನ್ಯಾಸೇವಿನಿಯೋಗಃ || ಓಂ ಪೃಥ್ವ್ಯಪ್ತೇಜೋವಾಯ್ವಾಕಾಶಾತ್ಮನೇ ಅಂಗುಷ್ಠಾಭ್ಯಾಂನಮಃ || ನಂ ಶಬ್ದಸ್ಪರ್ಶರೂಪ ರಸಗಂಧಾತ್ಮನೇ ತರ್ಜನೀಭ್ಯಾಂನಮಃ | ಮಂ ಶ್ರೋತ್ರತ್ವಕ್ಚಕ್ಷುರ್ಜಿಹ್ವಾಘ್ರಾಣಾತ್ಮನೇ ಮಧ್ಯಮಾಭ್ಯಾಂನಮಃ | ಶಿಂ ವಾಕ್ಪಾಣಿಪಾದಪಾಯೂಪಸ್ಥಾತ್ಮನೇ ಅನಾಮಿಕಾಭ್ಯಾಂ ನಮಃ | ವಾಂ ಪ್ರಾಣಾಪಾನವ್ಯಾನೋದಾನಸಮಾನ ವಚನಾದಾನ ಗಮನವಿಸರ್ಗಾನಂದಾತ್ಮನೇ ಕನಿಷ್ಠಿಕಾಭ್ಯಾಂ ನಮಃ | ಯಂ ಮನೋಹಂಕಾರ ಬುದ್ಧಿಚಿತ್ತಜ್ಞಾನಾತ್ಮನೇ ಕರತಲಕರಪೃಷ್ಠಾಭ್ಯಾಂನಮಃ || ಇದೇಪ್ರಕಾರವಾಗಿ ಹೃದಯಾದಿಷಡಂಗನ್ಯಾಸವನ್ನು ಮಾಡಬೇಕು. || ಧ್ಯಾನಂ || ರಕ್ತಾಂಭೋಧಿಸ್ಥಪೋತೋಲ್ಲಸದರುಣ ಸರೋಜಾಧಿರೂಢಾಕರಾಬ್ಜೈಃ | ಪಾಶಂಕೋದಂಡ ಮಿಕ್ಷೂದ್ಭವಮಲಿಗುಣಮಪ್ಯಂಕುಶಂಪಂಚಬಾಣಾನ್|| ಬಿಭ್ರಾಣಾಸೃಕ್ಕಪಾಲಂ ತ್ರಿನಯನಲಸಿತಾ ಪೀನವಕ್ಷೋರುಹಾಢ್ಯಾ | ದೇವೀಬಾಲಾರ್ಕವರ್ಣಾಭವತು ಸುಖಕರೀ ಪ್ರಾಣಶಕ್ತಿಃ ಪರಾನಃ|| ಈ ಪ್ರಕಾರವಾಗಿ ಧ್ಯಾನಿಸಿ, ಶಿಷ್ಯನಹೃದಯದಲ್ಲಿ ದಕ್ಷಿಣ ಹಸ್ತವನ್ನಿಟ್ಟು " ಶಿಷ್ಯಸ್ಯ ಪ್ರಾಣ ಇಹಪ್ರಾಣಃ ಶಿಷ್ಯಸ್ಯಜೀವ ಇಹಸ್ಥಿತಃ | ಶಿಷ್ಯಸ್ಯ ಸರ್ವೇಂದ್ರಿಯಾಣಿ ಕಾಯವಾಙ್ಮನಶ್ಚಕ್ಷುಃ ಶ್ರೋತ್ರ ಜಿಹ್ವಾಘ್ರಾಣಪ್ರಾಣಾ ಇಹೈವಾಗತ್ಯ ಸ್ವಸ್ತಯೇ ಸುಖಂ ಚಿರಂ ತಿಷ್ಠಂತು ಸ್ವಾಹಾ || ಎಂದು ಪ್ರಾಣ ಪ್ರತಿಷ್ಠೆಯನ್ನು ಮಾಡಬೇಕು. ಆ ಮೇಲೆ ಆಚಾರ್ಯನು ಶಿಷ್ಯನ ಅವಯವಗಳಲ್ಲಿ ದಂಡ ಭಂಗಿನ್ಯಾಸವನ್ನೂ, ಷಡಧ್ವನ್ಯಾಸವನ್ನೂ, ಹ. ಗೂ ಅಷ್ಟತ್ರಿಂಶತ್ಕಲಾನ್ಯಾಸವನ್ನೂ ಮಾಡಬೇಕು.

## " ದಂಡ ಭಂಗಿನ್ಯಾಸಃ "

" ಈಶಾನಃಸರ್ವವಿದ್ಯಾನಾಂ " ಈ ಮಂತ್ರವನ್ನುಚ್ಚರಿಸುತ್ತ ಹಸ್ತವನ್ನು ಮುಷ್ಟಿಮಾಡಿ ಅಂಗುಷ್ಠಾಗ್ರದಿಂದ ಶಿಷ್ಯನ ಮಸ್ತಕದಲ್ಲಿ ಮುಟ್ಟಬೇಕು. ತತ್ಪುರುಷಾಯುವಿದ್ಮಹೇ " ಈ ಮಂತ್ರವನ್ನುಚ್ಚರಿಸುತ್ತ ತರ್ಜನೀಅಂಗುಷ್ಠಗಳನ್ನು ಕೂಡಿಸಿ ಮುಖದಲ್ಲಿ ಮುಟ್ಟಬೇಕು. " ಅಘೋರೇಭ್ಯಃ " ಈ ಮಂತ್ರವನ್ನುಚ್ಚರಿಸುತ್ತ ಮಧ್ಯಮಾಂಗುಷ್ಠಗಳನ್ನು ಕೂಡಿಸಿ ಹೃದಯದಲ್ಲಿ ಮುಟ್ಟಬೇಕು. " ವಾಮ

ದೇವಾಯನಮಃ ,, ಈ ಮಂತ್ರವನ್ನುಚ್ಚರಿಸುತ್ತ ಅನಾಮಿಕಾಂಗುಷ್ಠಗಳನ್ನು ಕೂಡಿಸಿ ಗುಹ್ಯಪ್ರದೇಶದಲ್ಲಿ ಮುಟ್ಟಬೇಕು. " ಸದ್ಯೋಜಾತಂ ಪ್ರಪದ್ಯಾಮಿ ,, ಈ ಮಂತ್ರವನ್ನುಚ್ಚರಿಸುತ್ತ ಕನಿಷ್ಠಾಂಗುಷ್ಠಗಳಿಂದ ಎರಡು ಪಾದಗಳಲ್ಲಿ ಮುಟ್ಟಬೇಕು.

## " ಶಿಷ್ಯಾಂಗಷಡಧ್ವನ್ಯಾಸಃ ,,

ಶಿಷ್ಯನ ಮಾಂಸಪಿಂಡ ನಿವೃತ್ತಿಗಾಗಿ ಪಾದದಿಂದ ಮಸ್ತಕದವರೆಗೆ ಆರು ಸ್ಥಾನಗಳಲ್ಲಿ ಸಂಹಾರ ಕ್ರಮದಿಂದ ನ್ಯಾಸವನ್ನು ಮಾಡಬೇಕು. ಪಾದದಿಂದ ಮೊಣಕಾಲವರೆಗೆ ಭುವನಾಧ್ವನ್ಯಾಸವನ್ನೂ. ಮೊಣಕಾಲಿಂದ ನಾಭಿಯವರೆಗೆ ಪದಾಧ್ವನ್ಯಾಸವನ್ನೂ, ನಾಭಿಯಿಂದ ಹೃದಯದವರೆಗೆ ವರ್ಣಾಧ್ವನ್ಯಾಸವನ್ನೂ, ಹೃದಯದಿಂದ ಕಂಠದವರೆಗೆ ಕಲಾಧ್ವನ್ಯಾಸವನ್ನೂ, ಕಂಠದಿಂದ ಭ್ರೂಮಧ್ಯದವರೆಗೆ ತತ್ವಾಧ್ವನ್ಯಾಸವನ್ನೂ. ಭ್ರೂಮಧ್ಯದಿಂದ ಮಸ್ತಕದವರೆಗೆ ಮಂತ್ರಾಧ್ವನ್ಯಾಸವನ್ನೂ, ಮಾಡಬೇಕು. ಈ ನ್ಯಾಸಗಳನ್ನು ಪುಟಗಳಲ್ಲಿ ವಿಸ್ತಾರವಾಗಿ ಬರೆದ ಪ್ರಕಾರವಾಗಿ ಸರ್ವವಾಕ್ಯಗಳನ್ನು ಉಚ್ಚರಿಸುತ್ತ ಮಾಡಬೇಕು. ಆಮೇಲೆ ಮಂತ್ರ ಪಿಂಡೋತ್ಪತ್ತಿಗಾಗಿ ಮಸ್ತಕದಿಂದ ಪಾದದವರೆಗೆ ಆರುಸ್ಥಾನಗಳಲ್ಲಿ ಉತ್ಪತ್ತಿಕ್ರಮದಿಂದ ನ್ಯಾಸವನ್ನು ಮಾಡಬೇಕು. ಮಸ್ತಕದಿಂದ ಭ್ರೂಮಧ್ಯದವರೆಗೆ ಮಂತ್ರಾಧ್ವನ್ಯಾಸವನ್ನೂ, ಭ್ರೂಮಧ್ಯದಿಂದ ಕಂಠದವರೆಗೆ ತತ್ವಾಧ್ವನ್ಯಾಸವನ್ನೂ, ಕಂಠದಿಂದ ಹೃದಯದವರೆಗೆ ಕಲಾಧ್ವನ್ಯಾಸವನ್ನೂ, ಹೃದಯದಿಂದ ನಾಭಿಯವರೆಗೆ ವರ್ಣಾಧ್ವನ್ಯಾಸವನ್ನೂ, ನಾಭಿಯಿಂದ ಮೊಣಕಾಲಿನವರೆಗೆ ಪದಾಧ್ವನ್ಯಾಸವನ್ನೂ, ಮೊಣಕಾಲಿಂದ ಪಾದದವರೆಗೆ ಭುವನಾಧ್ವನ್ಯಾಸವನ್ನೂ ಮಾಡಬೇಕು. ೩೪-೪೧ ಪುಟಗಳಲ್ಲಿ ಹೇಳಿದಂತೆ ಸರ್ವವಾಕ್ಯಗಳನ್ನುಚ್ಚರಿಸುತ್ತ ಷಡಧ್ವನ್ಯಾಸವನ್ನು ಮಾಡಬೇಕು.

## " ಶಿಷ್ಯಾಂಗಾಷ್ಟತ್ರಿಂಶತ್ಕಲಾನ್ಯಾಸಃ ,,

೪೩-೪೫ ಪುಟಗಳಲ್ಲಿ ಹೇಳಿದಂತೆ ಶಿಷ್ಯನ ಯಾವತ್ತು ಅವಯವಗಳನ್ನು ಮುಟ್ಟುತ್ತ ಆಯಾ ಮಂತ್ರಗಳನ್ನು ಪಠಿಸುತ್ತ ೩೮ ಸ್ಥಾನಗಳಲ್ಲಿ ನ್ಯಾಸವನ್ನು ಮಾಡಬೇಕು.

## " ಕಲಶಾಭಿಷೇಕದೀಕ್ಷಾ "

ಆಚಾರ್ಯನು ಪ್ರಾಣಾಯಾಮವನ್ನು ಮಾಡಿ " ಏವಂ ಗುಣ ವಿಶಿಷ್ಟಾಯಾಂ ಶುಭಪುಣ್ಯತಿಥಾವಸ್ಯ ಕುಮಾರಸ್ಯ ಕಲಶಾಭಿಷೇಕಾಖ್ಯದೀಕ್ಷಾಂಕರಿಷ್ಯೇ " ಎಂದು ಸಂಕಲ್ಪವನ್ನು ಮಾಡಿ ನಾಲ್ವರು ಋತ್ವಿಜರು ಹಾಗೂ ತಾನು ತಮ್ಮ ತಮ್ಮ ಕಲಶಗಳನ್ನು ತೆಗೆದುಕೊಂಡು ಅದರಲ್ಲಿರತಕ್ಕ ತೀರ್ಥೋದಕದಿಂದ ಶಿಷ್ಯನ ಮಸ್ತಕ ಮುಖ ಹೃದಯ ಗುಹ್ಯ ಪಾದಗಳಲ್ಲಿ ಈಶಾನಾದಿ ಪಂಚಬ್ರಹ್ಮ ಮಂತ್ರಗಳಿಂದ ಅನುಕ್ರಮವಾಗಿ ಪ್ರೋಕ್ಷಿಸಿ ಆ ಕಲಶಗಳನ್ನು ಮೊದಲಿದ್ದ ಸ್ಥಾನದಲ್ಲಿಡಬೇಕು. ಪುನಃ ಆ ಕಲಶಗಳನ್ನು ತೆಗೆದುಕೊಂಡು ಪೂರ್ವದಂತೆ ಆ ಆ ಮಂತ್ರಗಳಿಂದ ಆ ಆ ಸ್ಥಾನಗಳಲ್ಲಿ ಪ್ರೋಕ್ಷಣವನ್ನು ಮಾಡಬೇಕು. ಇದರಂತೆ ಮೂರು ಸಾರೆ ಪ್ರೋಕ್ಷಣವನ್ನು ಮಾಡಿ ವಿಭೂತಿಧಾರಣವನ್ನು ಮಾಡಬೇಕು.

## " ಭೂತಿಪಟ್ಟದೀಕ್ಷಾ "

ಆಚಾರ್ಯನು ಪ್ರಾಣಾಯಾಮವನ್ನು ಮಾಡಿ ದೇಶಕಾಲಗಳನ್ನು ಕೀರ್ತಿಸಿ " ಏವಂ ಗುಣವಿಶಿಷ್ಟಾಯಾಂ ಶುಭಪುಣ್ಯತಿಥಾವಸ್ಯ ಕುಮಾರಸ್ಯಾಣವಾದಿ ಮಲ ಸಂಹಾರಾರ್ಥಂ ಭೂತಿಪಟ್ಟಾಖ್ಯದೀಕ್ಷಾಂ ಕರಿಷ್ಯೇ " ಎಂದು ಸಂಕಲ್ಪವನ್ನು ಮಾಡಿ ಭಸ್ಮವನ್ನು ಹಸ್ತದಲ್ಲಿ ತೆಗೆದುಕೊಂಡು ಈಶಾನಮಂತ್ರದಿಂದ ೫ ಸಾರೆ ಶಿರಸ್ಸನ್ನು, ತತ್ಪುರುಷಮಂತ್ರದಿಂದ ೪ ಸಾರೆ ಮುಖವನ್ನು, ಅಘೋರಮಂತ್ರದಿಂದ ೮ ಸಾರೆ ಹೃದಯವನ್ನು, ವಾಮದೇವಮಂತ್ರದಿಂದ ೧೩ ಸಾರೆ ಗುಹ್ಯವನ್ನು, ಸದ್ಯೋಜಾತಮಂತ್ರದಿಂದ ೮ ಸಾರೆ ಪಾದಗಳನ್ನು, ಪ್ರಣವಾಕ್ಷರ (ಓಂ) ದಿಂದ ಸರ್ವಾಂಗವನ್ನು ಉದ್ಧೂಲಿಸಬೇಕು. ಆ ಮೇಲೆ ವಿಭೂತಿಯನ್ನು ಜಲದಿಂದ ಮಿಶ್ರಮಾಡಿ

" ತ್ರಿಯಾಯುಷಂ ಜಮದಗ್ನೇಃ ಕಶ್ಯಪಸ್ಯ ತ್ರಿಯಾಯುಷಂ, ಅಗಸ್ತ್ಯಸ್ಯ ತ್ರಿಯಾಯುಷಂ ಯದ್ದೇವಾನಾಂ ತ್ರಿಯಾಯುಷಂ ತನ್ಮೇ ಅಸ್ತು ತ್ರಿಯಾಯುಷಂ ॥

ಈ ಮಂತ್ರವನ್ನುಚ್ಚರಿಸಿ ಮುಂದೆ ಹೇಳುವ ೧೫ ಸ್ಥಾನಗಳಲ್ಲಿ ತ್ರಿಪುಂಡ್ರಧಾರಣವನ್ನು ಮಾಡಬೇಕು.

ಓಂ ಶಿವಾಯನಮಃ ( ಮಸ್ತಕದಲ್ಲಿ )
ಓಂ ಮಹೇಶ್ವರಾಯನಮಃ ( ಹಣೆಯಲ್ಲಿ )
ಓಂ ರುದ್ರಾಯನಮಃ (೨ ಕಿವಿಗಳಲ್ಲಿ)
ಓಂ ಶ್ರೀಕಂಠಾಯನಮಃ (ಕಂಠದಲ್ಲಿ)
ಓಂ ಶಂಭವೇನಮಃ (೨ ಭುಜಗಳಲ್ಲಿ)
ಓಂ ಈಶ್ವರಾಯನಮಃ (ಹೃದಯದಲ್ಲಿ)
ಓಂ ಮಹಾದೇವಾಯನಮಃ (ನಾಭಿಯಲ್ಲಿ)
ಓಂ ಪಶುಪತಯೇನಮಃ (ಬೆನ್ನಿನಲ್ಲಿ) ।
ಓಂ ಶಂಕರಾಯನಮಃ (೨ ಮೊಣಕೈಗಳಲ್ಲಿ)
ಓಂ ವೃಷಧ್ವಜಾಯನಮಃ(ಹೆಗಲಿನಲ್ಲಿ)
ಓಂ ಪರಮಾತ್ಮನೇನಮಃ(೨ ಮುಂಗೈಗಳಲ್ಲಿ)

ಈ ಪ್ರಕಾರವಾಗಿ ಭಸ್ಮಧಾರಣ ಮಾಡಿದಮೇಲೆ ಪರಿಪೂತವಾದ ಭಸ್ಮಘಟಿಕೆಯನ್ನು ಕೊಡಬೇಕು.

## " ರುದ್ರಾಕ್ಷಧಾರಣಂ "

ಆ ಮೇಲೆ ಆಚಾರ್ಯನು ರುದ್ರಾಕ್ಷಗಳನ್ನು ತೆಗೆದುಕೊಂಡು ಪೂಜಿಸಿ " ರುದ್ರಾಕ್ಷ ವೃಕ್ಷಬೀಜಾಯ ಭೂತಿ ಸಂಭೂತಿ ಹೇತವೇ । ನೇತ್ರತ್ರಯಾಯ ರುದ್ರಾಯ ಸರ್ವಲೋಕ ಹಿತಾರ್ಥಿನೇ ॥ " ಈ ಮಂತ್ರದಿಂದ ನಮಸ್ಕರಿಸಿ ಮುಂದೆ ಹೇಳುವ ಆಯಾಯ ಸ್ಥಾನಗಳಲ್ಲಿ ಧರಿಸಬೇಕು.

| ಮಂತ್ರಗಳು | ಸ್ಥಾನ | ಮಣಿಸಂಖ್ಯೆ |
|---|---|---|
| ಓಂ ಶ್ರೀ ಸದಾಶಿವಾಯನಮಃ | ಶಿಖಾಸ್ಥಾನದಲ್ಲಿ | ೧ |
| ಓಂ ವಹ್ನಿಸೂರ್ಯ ಸೋಮಾಧಿಪಾಯನಮಃ | ಶಿರಸ್ಸಿನಲ್ಲಿ | ೩ |
| ಓಂ ಷಟ್ತ್ರಿಂಶತ್ತತ್ವಾತ್ಮನೇನಮಃ | ಮಸ್ತಕದಲ್ಲಿ | ೩೬ |
| ಓಂ ಷಡ್ಬ್ರಹ್ಮಣೇನಮಃ | ಬಲಗಿವಿಯಲ್ಲಿ | ೬ |
| ಓಂ ಅಷ್ಟಮೂರ್ತ್ಯಾತ್ಮನೇನಮಃ | ಎಡಗಿವಿಯಲ್ಲಿ | ೬ |
| ಓಂ ತ್ರಿಯಂಬಕ ಕಲಾತ್ಮನೇನಮಃ | ಕಂಠದಲ್ಲಿ | ೩೨ |

| | | |
|---|---|---|
| ಓಂ ಶ್ರೀ ಕಂಠಾದಿಮೂರ್ತ್ಯಾತ್ಮನೇ ನಮಃ | ಎದೆಯಲ್ಲಿ | ೫೦ |
| ಓಂ ಸುಖಾಸನಾದಿ ಷೋಡಶ ಮೂರ್ತ್ಯಾತ್ಮಕಾಯ ಶ್ರೀಕಂಠಾಯನಮಃ | ಬಲತೋಳಿನಲ್ಲಿ | ೧೬ |
| ಓಂ ಸೋಮಕಲಾತ್ಮಕಾಯ ಶ್ರೀಸೋಮನಾಥಾಯನಮಃ | ಎಡತೋಳಿನಲ್ಲಿ | ೧೬ |
| ಓಂ ದ್ವಾದಶಾದಿತ್ಯಾತ್ಮನೇ ಶ್ರೀ ಮಹಾದೇವಾಯನಮಃ | ಬಲಮುಂಗೈಯಲ್ಲಿ | ೧೨ |
| ಓಂ ಕೇಶವಾದಿ ಮೂರ್ತ್ಯಧಿಪಾಯ ಶ್ರೀ ಮದುಮಾಪತಯೇನಮಃ | ಎಡಮುಂಗೈಯಲ್ಲಿ | ೧೨ |
| ಓಂ ಶತರುದ್ರ ವಿದ್ಯೇಶ್ವರಾತ್ಮನೇ ಶ್ರೀ ವಿಶ್ವೇಶ್ವರಾಯನಮಃ | ಯಜ್ಞೋಪವೀತ | ೧೦೮ |

ಈ ಪ್ರಕಾರವಾಗಿ ಭೂತಿಪಟ್ಟದೀಕ್ಷೆಯಾದನಂತರ ಹೋಮವನ್ನು ಮಾಡಬೇಕು. ಆ ಮೇಲೆ ಆಚಾರ್ಯನು ಅಗ್ನಿಯ ಸಮೀಪಕ್ಕೆ ಹೋಗಿ ಕುಳಿತುಕೊಂಡು ವಟುವನ್ನು ತನ್ನ ಬಲಭಾಗದಲ್ಲಿ ಕುಳ್ಳಿರಿಸಿಕೊಂಡು ಪ್ರಾಣಾಯಾಮವನ್ನು ಮಾಡಿ " ಅಸ್ಯಾಂ ಶುಭತಿಥಾವಸ್ಯ ಕುಮಾರಸ್ಯ ಸಮಸ್ತ ಮಲಮಾಯಾ ವಿಚ್ಛೇದ ಪೂರ್ವಕ ತತ್ತದ್ದೀಕ್ಷಾಧಿಕಾರ ಸಿದ್ಧಿದ್ವಾರಾ ಶ್ರೀ ಪರಮೇಶ್ವರ ಪ್ರೀತ್ಯರ್ಥಂ ಪ್ರಧಾನದೇವತಾಂ ಹೋಮೇನಯಕ್ಷ್ಯೇ ,, ಎಂದು ಸಂಕಲ್ಪವನ್ನು ಮಾಡಿ ಷಡಕ್ಷರೀ ಮಂತ್ರದಿಂದ ೧೦ ಸಾರೆ ತುಪ್ಪದಿಂದ ಹೋಮವನ್ನು ಮಾಡಬೇಕು.

## " ಆಯುತ್ತದೀಕ್ಷಾ ".

ಅನಂತರ ಆಚಾರ್ಯನು ಮೊದಲಿನ ಸ್ಥಾನದಲ್ಲಿ ಬಂದು ಕುಳಿತು ತನ್ನ ಬಲಭಾಗದಲ್ಲಿ ವಟುವನ್ನು ಉತ್ತರ ಮುಖನನ್ನಾಗಿ ಕೂಡ್ರಿಸಿಕೊಂಡು ಪ್ರಾಣಾಯಾಮವನ್ನು ಮಾಡಿ ದೇಶಕಾಲಗಳನ್ನು ಕೀರ್ತಿಸಿ " ಅಸ್ಯ ಕುಮಾರಸ್ಯಾಯತ್ತಾಖ್ಯ ದೀಕ್ಷಾಂ ಕರಿಷ್ಯೇ ,, ಎಂದು ಸಂಕಲ್ಪವನ್ನು ಮಾಡಿ ಪಾತ್ರೆಯಲ್ಲಿದ್ದ ಸರ್ವ ನ್ಯಾಸ

ಪೂರಿತವಾದ ಶಿವಲಿಂಗವನ್ನು ತೆಗೆದುಕೊಂಡು ಪೂಜಿಸಿ ಆ ಶಿವಲಿಂಗವನ್ನು ನೂತನ ವಸ್ತ್ರದಲ್ಲಿಡಬೇಕು. ಆ ಮೇಲೆ ಶಿಷ್ಯನ ಎರಡು ಹಸ್ತಗಳನ್ನು ಪೂಜಿಸಿ ಹಾಗೂ ಶಿಷ್ಯನ ಮಸ್ತಕವನ್ನು ಪೂಜಿಸಿ ಗಾಯತ್ರೀಮಂತ್ರದಿಂದ ಮೂರುಸಾರೆ ಮಸ್ತಕ ವನ್ನು ಅಭಿಮಂತ್ರಿಸಿ ಆ ಸ್ಥಾನದಲ್ಲಿ,

ನೀಲತೋಯದ ಮಧ್ಯಸ್ಥಾ ವಿದ್ಯುಲ್ಲೇಖೇವ ಭಾಸ್ವರಾ ।
ನೀವಾರಶೂಕವತ್ತನ್ವೀ ಪೀತಾಭಾಸ್ವತ್ಯಣೂಪಮಾ ॥
ತಸ್ಯಾಃ ಶಿಖಾಯಾಮಧ್ಯೇಷುಪರಮಾತ್ಮಾವ್ಯವಸ್ಥಿತಃ ।

ಸಬ್ರಹ್ಮಾಸಶಿವಃ ಸಹರಿಃ ಸೇಂದ್ರಃ ಸೋಽಕ್ಷರಃಪರಮಸ್ವರಾಟ್ ॥

ಈ ಶ್ರುತಿವಾಕ್ಯಗಳಿಂದ ಜ್ಯೋತೀರೂಪವಾದ ಚಿತ್ಕಲೆಯನ್ನು ಧ್ಯಾನಿಸಿ ಮಾನ ಸಿಕೋಪಚಾರಗಳಿಂದ ಪೂಜಿಸಿ " ಭಗವನ್ ಆವಾಹಿತೋಭವ ಸ್ಥಾಪಿತೋ ಭವ ಸನ್ನಿಹಿತೋಭವ ಸಮ್ಮುಖೋಭವ ಅವಕುಂಠಿತೋಭವ ವರದೋಭವ " ಎಂದು ಷಣ್ಮುದ್ರೆಗಳನ್ನು ತೋರಿಸಬೇಕು. ಆ ಮೇಲೆ ಆಚಾರ್ಯನು ತನ್ನ ದಕ್ಷಿ ಣ ಹಸ್ತದಲ್ಲಿ ಗಂಧ ಮಂಡಲವನ್ನು ರಚಿಸಿ ಅಂಗುಷ್ಠಾದಿ ಪಂಚಾಂಗುಲಿಗಳಲ್ಲಿ ಅನು ಕ್ರಮವಾಗಿ ನಕಾರಾದಿಗಳನ್ನು ಹಾಗೂ ಹಸ್ತದ ಮಧ್ಯದಲ್ಲಿ ಓಂಕಾರವನ್ನು ಬರೆ ದುಕೊಂಡು ಅಲ್ಲಿ ಸದ್ಯೋಜಾತಾದಿ ಪಂಚಬ್ರಹ್ಮಮೂರ್ತಿಗಳನ್ನು ಆಹ್ವಾನಮಾಡಿ ಕೊಂಡು ಪೂಜಿಸಿ

ಯೋವೇದಾದೌಸ್ವರಃ ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತಃ ।
ತಸ್ಯ ಪ್ರಕೃತಿಲೀನಸ್ಯ ಯಃ ಪರಃ ಸಮಹೇಶ್ವರಃ ॥
ಎಂದು ಓಂಕಾರವನ್ನು ಧ್ಯಾನಿಸಬೇಕು. ಆ ಮೇಲೆ ॥
" ಅಯಂಮೇಹಸ್ತೋಭಗವಾನಯಂ ಮೇಭಗವತ್ತರಃ ॥
ಅಯಂಮೇ ವಿಶ್ವಭೇಷಜೋಽಯಂ ಶಿವಾಭಿಮರ್ಶನಃ "

ಈಮಂತ್ರವನ್ನುಚ್ಚರಿಸಿ " ಅಯಂ ಹಸ್ತಃ ಪಾಶನಿವರ್ತಕಃ ಶುಭಂ ಕರಃ " ಎಂದು ಆ ಹಸ್ತವನ್ನು ಶಿವತೇಜೋಮಯವನ್ನಾಗಿ ಭಾವಿಸಿ ಶಿವಮಂತ್ರವನ್ನುಚ್ಚ ರಿಸುವವನಾಗಿ ಶಿಷ್ಯನ ಶಿರಸ್ಸಿನಲ್ಲಿ ಪುಷ್ಪದರ್ಭಗಳಿಂದ ಕೂಡಿದ ಶಿವಹಸ್ತವನ್ನಿಟ್ಟು,

ಆ ಶಿಷ್ಯನೇ ಶಿವಾಸನವೆಂದು ಭಾವಿಸಿ ಅಲ್ಲಿ ನಾದ ಬಿಂದುಯುತವಾದ ಚಿತ್ಪೀಠವನ್ನು ಭಾವಿಸಬೇಕು ಆ ಚಿತ್ಪೀಠದಲ್ಲಿ.

ಜ್ವಲತ್ಕಾಲಾನಲಾಭಾಸಾ ತಟಿತ್ಕೋಟಿಸಮಪ್ರಭಾ ।
ತಸ್ಯೋರ್ಧ್ವಂ ಚ ಶಿಖಾಸೂಕ್ಷ್ಮಾ ಚಿದ್ರೂಪಾಪರಮಾಕಲಾ ॥
ಯಥಾಕಲಾ ತಥಾಭಾವೋ ಯಥಾಭಾವಸ್ತಥಾಮನಃ ।
ಯಥಾಮನಸ್ತಥಾದೃಷ್ಟಿರ್ಯಥಾದೃಷ್ಟಿಸ್ತಥಾಸ್ಥಲಂ ॥
ಸಾಕಲಾ ಪರಮಾ ಸೂಕ್ಷ್ಮಾ ತತ್ವಾನಾಂ ಬೋಧಿನೀಪರಾ ॥

ಎಂದು ಶಿವಕಲೆಯನ್ನು ಧ್ಯಾನಿಸಿ ಆ ಕಲೆಯನ್ನು ಮಾನಸಿಕೋಪಚಾರದಿಂದ ಪೂಜಿಸಿ ಶಿವತೇಜೋಮಯವಾದ ಹಸ್ತದಿಂದ ವಟುವಿನ ಸರ್ವಾಂಗವನ್ನು ಸ್ಪರ್ಶಿಸಬೇಕು. ಆ ಮೇಲೆ ಶಿಷ್ಯನ ಮಸ್ತಕದಲ್ಲಿದ್ದಂಥ ಶಿವಕಲೆಯನ್ನು ಶಿವಲಿಂಗದಲ್ಲಿ ಯೋಜಿಸಬೇಕು.

## "ಶಿವಕಲಾಯೋಜನಕ್ರಮಃ"

ಆಚಾರ್ಯನು ಹಸ್ತದಲ್ಲಿ ಪುಷ್ಪಾಕ್ಷತಾದಿಗಳನ್ನು ಹಿಡಿದುಕೊಂಡು,

ಸಓಂಕಾರೋ ಯ ಓಂಕಾರಃ ಸಪ್ರಣವೋಯಃ ಪ್ರಣವಃ ಸಸರ್ವವ್ಯಾಪೀ ಸೋನಂತೋಯೋನಂತಃ ತತ್ತಾರಂ ಯತ್ತಾರಂ ತತ್ಸೂಕ್ಷ್ಮಂ ಯತ್ಸೂಕ್ಷ್ಮಂ ತಚ್ಛುಕ್ಲಂ ಯಚ್ಛುಕ್ಲಂ ತದ್ವೈದ್ಯುತಂ ಯದ್ವೈದ್ಯುತಂ ತತ್ಪರಂ ಬ್ರಹ್ಮಸಏವ ಸಏಕೋಸುದ್ರಃ ಸಈಶ್ವರಃ ಸಭಗವಾನ್ ಸಮಹೇಶ್ವರಃ ಸಮಹಾದೇವಃ"

ಈ ಮಂತ್ರದಿಂದ ಶಿಷ್ಯನ ಬ್ರಹ್ಮರಂಧ್ರದಲ್ಲಿದ್ದ ಸಹಸ್ರದಲಕಮಲಕರ್ಣಿಕಾಮಧ್ಯದಲ್ಲಿ ವಿಹರಿಸುತ್ತಿರುವ ಕೋಟಿ ಸೂರ್ಯಪ್ರಕಾಶಮಾನವಾದ ಅತಿಸೂಕ್ಷ್ಮರೂಪವಾದ ಚಿತ್ಕಲೆಯನ್ನು ಭಾವಮನೋದೃಷ್ಟಿದ್ವಾರದಿಂದ ಪ್ರತ್ಯಕ್ಷಮಾಡಿ

"ನೀಲತೋಯದ ಮಧ್ಯಸ್ಥಾ ವಿದ್ಯುಲ್ಲೇಖೇವಭಾಸ್ವರಾ ।
ನೀವಾರಶೂಕವತ್ತನ್ವೀಪೀತಾಭಾಸ್ವ ತ್ಯಣೂಪಮಾ ॥

ತಸ್ಯಾಃ ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ ||
ಸಬ್ರಹ್ಮಾ ಸಶಿವಃ ಸಹರಿಃ ಸೇಂದ್ರಃ ಸೋಽಕ್ಷರಃ ಪರಮಃ ಸ್ವರಾಟ್ "

ಈ ಶ್ರುತಿವಾಕ್ಯಗಳನ್ನುಚ್ಚರಿಸುತ್ತ ಪರಶಿವ ಮೂರ್ತಿಯನ್ನು ಸುಷುಮ್ನಾ ನಾಡೀ ಮಾರ್ಗದಿಂದ ಹೊರಡಿಸಿ ಪುಷ್ಪಾಕ್ಷತಾದಿಗಳಿಂದ ಕೂಡಿದ ತನ್ನ ಹಸ್ತಗಳಲ್ಲಿ ತಂದು ಶಿವಪಂಚಾಕ್ಷರೀ ಮಂತ್ರದಿಂದ " ಸರ್ವಾಂತರ್ಯಾಮಿಣಂ ಲೋಕಾನುಗ್ರಹಾಯ ಗೃಹೀತವಿಗ್ರಹಂ ಜ್ಯೋತಿರ್ಮಯಂ ಸರ್ವಮಂಗಲಾತ್ಮಕಂ ಭಗವಂತಮಾವಾಹಯಾಮಿ ,, ಎಂದು ಆ ಶಿವಕಳೆಯನ್ನು " ಕ್ರಾಂ ,, ಎಂದು ಅಂಕುಶ ಮುದ್ರೆಯಿಂದ ಆಕರ್ಷಿಸಿ ಆವಾಹನಮಾಡಿ ಶಿವಲಿಂಗದಲ್ಲಿ ಸ್ಥಾಪಿಸಬೇಕು.

ಅಸ್ಯಶ್ರೀ ಪ್ರಾಣಪ್ರತಿಷ್ಠಾಪನ ಮಂತ್ರಸ್ಯ ಬ್ರಹ್ಮವಿಷ್ಣುಮಹೇಶ್ವರಾ ಋಷಯಃ ! ಋಗ್ಯಜುಃ ಸಾಮಾಥರ್ವಾಣಿಚ್ಛಂದಾಂಸಿ | ಸಕಲ ಜಗತ್ಸೃಷ್ಟಿಸ್ಥಿತಿ ಸಂಹಾರ ಕಾರಿಣೀಪ್ರಾಣಶಕ್ತಿರ್ದೇವತಾ ! ಅಂಬೀಜಂ | ಹ್ರೀಂಶಕ್ತಿಃ ಹ್ರೂಂಕೀಲಕಂ | ಪ್ರಾಣಪ್ರತಿಷ್ಠಾನ್ಯಾಸೇ ವಿನಿಯೋಗಃ || ಓಂ ಪೃಥಿವ್ಯಪ್ತೇಜೋವಾಯ್ವಾಕಾಶಾತ್ಮನೇ ಅಂಗುಷ್ಠಾಭ್ಯಾಂನಮಃ | ನಂ ಶಬ್ದಸ್ಪರ್ಶ ರೂಪ ರಸಗಂಧಾತ್ಮನೇ ತರ್ಜನೀಭ್ಯಾಂನಮಃ | ಮಂ ಶ್ರೋತ್ರತ್ವಕ್ಚಕ್ಷುರ್ಜಿಹ್ವಾಘ್ರಾಣಾತ್ಮನೇ ಮಧ್ಯಮಾಭ್ಯಾಂ ನಮಃ | ಶಿಂ ವಾಕ್ಪಾಣಿಪಾದಪಾಯೂಪಸ್ಥಾತ್ಮನೇ ಅನಾಮಿಕಾಭ್ಯಾಂನಮಃ | ವಾಂ ಪ್ರಾಣಾಪಾನ ವ್ಯಾನೋದಾನ ಸಮಾನವಚನಾದಾನ ಗಮನ ವಿಸರ್ಗಾನಂದಾತ್ಮನೇ ಕನಿಷ್ಠಿಕಾಭ್ಯಾಂನಮಃ | ಯಂ ಮನೋಹಂಕಾರ ಬುದ್ಧಿ ಚಿತ್ತಜ್ಞಾನಾತ್ಮನೇ ಕರತಲಕರಪೃಷ್ಠಾಭ್ಯಾಂನಮಃ ||

ಓಂ ಪೃಥಿವ್ಯಪ್ತೇಜೋವಾಯ್ವಾಕಾಶಾತ್ಮನೇ ಹೃದಯಾಯನಮಃ || ನಂ ಶಬ್ದಸ್ಪರ್ಶ ರೂಪ ರಸಗಂಧಾತ್ಮನೇ ಶಿರಸೇಸ್ವಾಹಾ | ಮಂ ಶ್ರೋತ್ರತ್ವಕ್ಚಕ್ಷುರ್ಜಿಹ್ವಾಘ್ರಾಣಾತ್ಮನೇ ಶಿಖಾಯೈವಷಟ್ | ಶಿಂ ವಾಕ್ಪಾಣಿ ಪಾದಪಾಯೂಪಸ್ಥಾತ್ಮನೇ ಕವಚಾಯ ಹುಂ | ವಾಂ ಪ್ರಾಣಾಪಾನವ್ಯಾನೋದಾನ ಸಮಾನವಚನಾದಾನ ಗಮನವಿಸರ್ಗಾನಂದಾತ್ಮನೇ ನೇತ್ರತ್ರಯಾಯ ವೌಷಟ್ | ಯಂ ಮ

ನೋಽಹಂಕಾರ ಬುದ್ಧಿ ಚಿತ್ತ ಜ್ಞಾನಾತ್ಮನೇ ಅಸ್ತ್ರಾಯಫಟ್ ॥ ಭೂರ್ಭುವಃ ಸ್ವರೋಮಿತಿದಿಗ್ಬಂಧಃ ॥

ಧ್ಯಾನಂ ॥ ರಕ್ತಾಂಭೋಧಿಸ್ಥಪೋತೋಲ್ಲಸದರುಣ ಸರೋಜಾಧಿರೂಢಾ ಕರಾಬ್ಜೈಃ । ಪಾಶಂಕೋದಂಡ ಮಿಕ್ಷೂದ್ಭವ ಮಲಿಗುಣಮಪ್ಯಂಕುಶಂ ಪಂಚಬಾಣಾನ್ ॥ ಬಿಭ್ರಾಣಾಸೃಕ್ಕಪಾಲಂತ್ರಿನಯನ ಲಸಿತಾ ಪೀನವಕ್ಷೋರುಹಾಢ್ಯಾ । ದೇವೀಬಾಲಾರ್ಕವರ್ಣಾ ಭವತು ಸುಖಕರೀ ಪ್ರಾಣಶಕ್ತಿಃ ಪರಾನಃ ॥

ಶಿವಸ್ಯ ಪ್ರಾಣ ಇಹಪ್ರಾಣಃ । ಶಿವಸ್ಯ ಜೀವ ಇಹಸ್ಥಿತಃ । ಶಿವಸ್ಯ ಸರ್ವೇಂದ್ರಿಯಾಣಿ ಕಾಯವಾಙ್ಮನಶ್ಚಕ್ಷುಃ ಶ್ರೋತ್ರ ಜಿಹ್ವಾಘ್ರಾಣ ಪ್ರಾಣಾ ಇಹೈವಾಗತ್ಯ ಸ್ವಸ್ತ್ಯೇ ಸುಖಂ ಚಿರಂ ತಿಷ್ಠಂತು ಸ್ವಾಹಾ ॥

ಎಂದು ಪ್ರಾಣ ಪ್ರತಿಷ್ಠೆಯನ್ನು ಮಾಡಿ ಪೂಜಿಸಬೇಕು. ಆ ಮೇಲೆ ಶಿವಲಿಂಗದ ಹಾಗೂ ವಟುವಿನ ನಡುವೆ ಅಂತಃಪಟವನ್ನು ಹಿಡಿಸಿ " ತದೇವ ಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ ॥ ವಿದ್ಯಾಬಲಂ ದೈವಬಲಂ ತದೇವ ಗೌರೀಪತೇ ತೇಂಘ್ರಿಯುಗಂ ಸ್ಮರಾಮಿ ,, ಎಂಬೀ ಮಂಗಲಾಷ್ಟಕವನ್ನು ಪಠಿಸಿ ಅಂತಃಪಟವನ್ನು ತೆಗೆದು ಹಾಕಿ " ಎಲೋ ವಟುವೇ ಪೂಜಿತವಾದ ಈ ಶಿವಲಿಂಗವನ್ನು ನೋಡು ,, ಹೀಗೆಂದು ಶಿಷ್ಯನ ಮಸ್ತಕದಲ್ಲಿ ಮಂತ್ರಾಕ್ಷತೆಗಳನ್ನು ಹಾಕಬೇಕು.

## " ಸ್ವಾಯತ್ತದೀಕ್ಷಾ "

ಆ ಮೇಲೆ ಆಚಾರ್ಯನು ಪ್ರಾಣಾಯಾಮವನ್ನು ಮಾಡಿ ದೇಶಕಾಲಗಳನ್ನು ಕೀರ್ತಿಸಿ " ಅಸ್ಯಾಂ ಶುಭತಿಥಾವಸ್ಯ ಕುಮಾರಸ್ಯ ಸ್ವಾಯತ್ತಾಭಿಧ ದೀಕ್ಷಾಂ ಕರಿಷ್ಯೇ ಎಂದು ಸಂಕಲ್ಪವನ್ನು ಮಾಡಿ ತನ್ನ ವಾಮಹಸ್ತದಲ್ಲಿ ಶಿವಲಿಂಗವನ್ನಿಟ್ಟುಕೊಂಡು ಪುಷ್ಪಾಂಜಲಿಯನ್ನು ಕೊಟ್ಟು " ತದೇವಲಗ್ನಂ ಸುದಿನಂ ತದೇವ ಎಂಬ ಮಂಗಲಾಷ್ಟಕವನ್ನು ಪಠಿಸಬೇಕು. ಆ ಮೇಲೆ ಶಿಷ್ಯನು

ತಸ್ಯಾಃ ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ ||
ಸಬ್ರಹ್ಮಾ ಸಶಿವಃ ಸಹರಿಃ ಸೇಂದ್ರಃ ಸೋಽಕ್ಷರಃ ಪರಮಃ ಸ್ವರಾಟ್ "

ಈ ಶ್ರುತಿವಾಕ್ಯಗಳನ್ನುಚ್ಚರಿಸುತ್ತ ಪರಶಿವ ಮೂರ್ತಿಯನ್ನು ಸುಷುಮ್ನಾ ನಾಡೀ ಮಾರ್ಗದಿಂದ ಹೊರಡಿಸಿ ಪುಷ್ಪಾಕ್ಷತಾದಿಗಳಿಂದ ಕೂಡಿದ ತನ್ನ ಹಸ್ತಗಳಲ್ಲಿ ತಂದು ಶಿವಪಂಚಾಕ್ಷರೀ ಮಂತ್ರದಿಂದ " ಸರ್ವಾಂತರ್ಯಾಮಿಣಂ ಲೋಕಾನುಗ್ರಹಾಯ ಗೃಹೀತವಿಗ್ರಹಂ ಜ್ಯೋತಿರ್ಮಯಂ ಸರ್ವಮಂಗಲಾತ್ಮಕಂ ಭಗವಂತಮಾವಾಹಯಾಮಿ ,, ಎಂದು ಆ ಶಿವಕಳೆಯನ್ನು " ಕ್ರೌಂ ,, ಎಂದು ಅಂಕುಶ ಮುದ್ರೆಯಿಂದ ಆಕರ್ಷಿಸಿ ಆವಾಹನಮಾಡಿ ಶಿವಲಿಂಗದಲ್ಲಿ ಸ್ಥಾಪಿಸಬೇಕು.

ಅಸ್ಯಶ್ರೀ ಪ್ರಾಣಪ್ರತಿಷ್ಠಾಪನ ಮಂತ್ರಸ್ಯ ಬ್ರಹ್ಮವಿಷ್ಣುಮಹೇಶ್ವರಾಃ ಋಷಯಃ ! ಋಗ್ಯಜುಃ ಸಾಮಾಥರ್ವಾಣಾಶ್ಛಂದಾಂಸಿ | ಸಕಲ ಜಗತ್ಸೃಷ್ಟಿಸ್ಥಿತಿ ಸಂಹಾರ ಕಾರಿಣೀಪ್ರಾಣಶಕ್ತಿರ್ದೇವತಾ ! ಅಂಬೀಜಂ | ಹ್ರೀಂಶಕ್ತಿಃ ಹ್ರೂಂಕೀಲಕಂ | ಪ್ರಾಣಪ್ರತಿಷ್ಠಾನ್ಯಾಸೇ ವಿನಿಯೋಗಃ || ಓಂ ಪೃಥಿವ್ಯಪ್ತೇಜೋವಾಯ್ವಾಕಾಶಾತ್ಮನೇ ಅಂಗುಷ್ಠಾಭ್ಯಾಂನಮಃ | ನಂ ಶಬ್ದಸ್ಪರ್ಶ ರೂಪ ರಸಗಂಧಾತ್ಮನೇ ತರ್ಜನೀಭ್ಯಾಂನಮಃ | ಮಂ ಶ್ರೋತ್ರತ್ವಕ್ಚಕ್ಷುರ್ಜಿಹ್ವಾಘ್ರಾಣಾತ್ಮನೇ ಮಧ್ಯಮಾಭ್ಯಾಂ ನಮಃ | ಶಿಂ ವಾಕ್ಪಾಣಿಪಾದಪಾಯೂಪಸ್ಥಾತ್ಮನೇ ಅನಾಮಿಕಾಭ್ಯಾಂನಮಃ | ವಾಂ ಪ್ರಾಣಾಪಾನ ವ್ಯಾನೋದಾನ ಸಮಾನವಚನಾದಾನ ಗಮನ ವಿಸರ್ಗಾನಂದಾತ್ಮನೇ ಕನಿಷ್ಠಿಕಾಭ್ಯಾಂನಮಃ | ಯಂ ಮನೋಽಹಂಕಾರ ಬುದ್ಧಿ ಚಿತ್ತಜ್ಞಾನಾತ್ಮನೇ ಕರತಲಕರಪೃಷ್ಠಾಭ್ಯಾಂನಮಃ ||

ಓಂ ಪೃಥಿವ್ಯಪ್ತೇಜೋವಾಯ್ವಾಕಾಶಾತ್ಮನೇ ಹೃದಯಾಯನಮಃ || ನಂ ಶಬ್ದಸ್ಪರ್ಶ ರೂಪ ರಸಗಂಧಾತ್ಮನೇ ಶಿರಸೇಸ್ವಾಹಾ | ಮಂ ಶ್ರೋತ್ರತ್ವಕ್ಚಕ್ಷುರ್ಜಿಹ್ವಾಘ್ರಾಣಾತ್ಮನೇ ಶಿಖಾಯೈವಷಟ್ | ಶಿಂ ವಾಕ್ಪಾಣಿ ಪಾದಪಾಯೂಪಸ್ಥಾತ್ಮನೇ ಕವಚಾಯ ಹುಂ | ವಾಂ ಪ್ರಾಣಾಪಾನವ್ಯಾನೋದಾನ ಸಮಾನವಚನಾದಾನ ಗಮನವಿಸರ್ಗಾನಂದಾತ್ಮನೇ ನೇತ್ರತ್ರಯಾಯ ವೌಷಟ್ | ಯಂ ಮ

ನೋಽಹಂಕಾರ ಬುದ್ಧಿ ಚಿತ್ತಜ್ಞಾನಾತ್ಮನೇ ಅಸ್ತ್ರಾಯಫಟ್ ‖ ಭೂರ್ಭುವಃ ಸ್ವರೋ ಮಿತಿದಿಗ್ಬಂಧಃ ‖

ಧ್ಯಾನಂ ‖ ರಕ್ತಾಂಭೋಧಿಸ್ಥಪೋತೋಲ್ಲಸದರುಣ ಸರೋಜಾಧಿರೂಢಾ ಕರಾಬ್ಜೈಃ । ಪಾಶಂಕೋದಂಡ ಮಿಕ್ಷೂದ್ಭವ ಮಲಿಗುಣಮಪ್ಯಂಕುಶಂ ಪಂಚಬಾಣಾನ್ ‖ ಬಿಭ್ರಾಣಾಸೃಕ್ಕಪಾಲಂತ್ರಿನಯನ ಲಸಿತಾ ಪೀನವಕ್ಷೋರುಹಾಢ್ಯಾ । ದೇವೀಬಾಲಾರ್ಕವರ್ಣಾ ಭವತು ಸುಖಕರೀ ಪ್ರಾಣಶಕ್ತಿಃ ಪರಾನಃ ‖

ಶಿವಸ್ಯ ಪ್ರಾಣ ಇಹಪ್ರಾಣಃ । ಶಿವಸ್ಯ ಜೀವ ಇಹಸ್ಥಿತಃ । ಶಿವಸ್ಯ ಸರ್ವೇಂದ್ರಿಯಾಣಿ ಕಾಯವಾಙ್ಮನಶ್ಚಕ್ಷುಃ ಶ್ರೋತ್ರ ಜಿಹ್ವಾಘ್ರಾಣ ಪ್ರಾಣಾ ಇಹೈವಾಗತ್ಯ ಸ್ವಸ್ತ ಯೇ ಸುಖಂ ಚಿರಂ ತಿಷ್ಠಂತು ಸ್ವಾಹಾ ‖

ಎಂದು ಪ್ರಾಣ ಪ್ರತಿಷ್ಠೆಯನ್ನು ಮಾಡಿ ಪೂಜಿಸಬೇಕು. ಆ ಮೇಲೆ ಶಿವಲಿಂಗದ ಹಾಗೂ ವಟುವಿನ ನಡುವೆ ಅಂತಃಪಟವನ್ನು ಹಿಡಿಸಿ " ತದೇವ ಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ ‖ ವಿದ್ಯಾಬಲಂ ದೈವಬಲಂ ತದೇವ ಗೌರೀಪತೇ ತೇಂಘ್ರಿಯುಗಂ ಸ್ಮರಾಮಿ „ ಎಂಬೀ ಮಂಗಲಾಷ್ಟಕವನ್ನು ಪಠಿಸಿ ಅಂತಃಪಟವನ್ನು ತೆಗೆದು ಹಾಕಿ " ಎಲೋ ವಟುವೇ ಪೂಜಿತವಾದ ಈ ಶಿವಲಿಂಗವನ್ನು ನೋಡು „ ಹೀಗೆಂದು ಶಿಷ್ಯನ ಮಸ್ತಕದಲ್ಲಿ ಮಂತ್ರಾಕ್ಷತೆಗಳನ್ನು ಹಾಕಬೇಕು.

## " ಸ್ವಾಯತ್ತದೀಕ್ಷಾ "

ಆ ಮೇಲೆ ಆಚಾರ್ಯನು ಪ್ರಾಣಾಯಾಮವನ್ನು ಮಾಡಿ ದೇಶಕಾಲಗಳನ್ನು ಕೀರ್ತಿಸಿ " ಅಸ್ಯಾಂ ಶುಭತಿಥಾವಸ್ಯ ಕುಮಾರಸ್ಯ ಸ್ವಾಯತ್ತಾಭಿಧ ದೀಕ್ಷಾಂ ಕರಿಷ್ಯೇ ಎಂದು ಸಂಕಲ್ಪವನ್ನು ಮಾಡಿ ತನ್ನ ವಾಮಹಸ್ತದಲ್ಲಿ ಶಿವಲಿಂಗವನ್ನಿಟ್ಟುಕೊಂಡು ಪುಷ್ಪಾಂಜಲಿಯನ್ನು ಕೊಟ್ಟು " ತದೇವಲಗ್ನಂ ಸುದಿನಂ ತದೇವ „ ಎಂಬ ಮಂಗಲಾಷ್ಟಕವನ್ನು ಪಠಿಸಬೇಕು. ಆ ಮೇಲೆ ಶಿಷ್ಯನು

ಓಂ ಬೀಜಂ । ಉಮಾಶಕ್ತಿಃ (ಗುಹ್ಯೇ) । ಶಿವ ಇತಿ ಕೀಲಕಂ (ಪಾದಯೋಃ) ।
ಶ್ರೀ ಸದಾಶಿವ ಪ್ರೀತ್ಯರ್ಥೇ ಜಪೇ ವಿನಿಯೋಗಃ ॥ ಕರನ್ಯಾಸಃ ॥

ಓಂ ಯಂ ಓಂ ಸರ್ವಜ್ಞಶಕ್ತಿಧಾಮ್ನೇ ಅಂಗುಷ್ಠಾಭ್ಯಾಂ ನಮಃ
ಓಂ ವಾಂ ಓಂ ನಿತ್ಯತೃಪ್ತಿಶಕ್ತಿಧಾಮ್ನೇ ತರ್ಜನೀಭ್ಯಾಂ ನಮಃ
ಓಂ ಶಿಂ ಓಂ ಅನಾದಿಬೋಧ ಶಕ್ತಿಧಾಮ್ನೇ ಮಧ್ಯಮಾಭ್ಯಾಂ ನಮಃ
ಓಂ ವಂ ಓಂ ಸ್ವತಂತ್ರ ಶಕ್ತಿಧಾಮ್ನೆ ಅನಾಮಿಕಾಭ್ಯಾಂ ನಮಃ
ಓಂ ನಂ ಓಂ ಅಲುಪ್ತಶಕ್ತಿಧಾಮ್ನೇ ಕನಿಷ್ಠಿಕಾಭ್ಯಾಂ ನಮಃ
ಓಂ ಓಂ ಓಂ ಅನಂತ ಶಕ್ತಿಧಾಮ್ನೇ ಕರತಲ ಕರಪೃಷ್ಠಾಭ್ಯಾಂ ನಮಃ

## ॥ ದೇಹನ್ಯಾಸಃ ॥

೧ ಓಂ ಯಂ ಓಂ ಈಶಾನಾಯನಮಃ । ೨ ಓಂ ವಾಂ ಓಂ ತತ್ಪುರುಷಾಯ
ನಮಃ । ಮುಖೇ ।

೩ ಓಂ ಶಿಂ ಓಂ ಅಘೋರಾಯನಮಃ । ಹೃದಯೇ । ೪ ಓಂ ಮಂ ಓಂ ವಾ
ಮದೇವಾಯನಮಃ । ಗುಹ್ಯೇ ।
೫ ಓಂ ನಂ ಓಂ ಸದ್ಯೋಜಾತಾಯನಮಃ । ಪಾದದ್ವಯೇ । ೬ ಓಂ ಓಂ
ಓಂ ಪ್ರಣವಾಯನಮಃ । ಸರ್ವಾಂಗೇ ।

## ॥ ಅಂಗನ್ಯಾಸಃ ॥

ಓಂ ಯಂ ಓಂ ಸರ್ವಜ್ಞಶಕ್ತಿಧಾಮ್ನೇಹೃದಯಾಯನಮಃ
ಓಂ ವಾಂ ಓಂ ನಿತ್ಯತೃಪ್ತಿಶಕ್ತಿಧಾಮ್ನೇ ಶಿರಸೇಸ್ವಾಹಾ
ಓಂ ಶಿಂ ಓಂ ಅನಾದಿಬೋಧ ಶಕ್ತಿಧಾಮ್ನೇ ಶಿಖಾಯೈವಷಟ್
ಓಂ ಮಂ ಓಂ ಸ್ವತಂತ್ರಶಕ್ತಿಧಾಮ್ನೆ ಕವಚಾಯ ಹುಂ
ಓಂ ನಂ ಓಂ ಅಲುಪ್ತ ಶಕ್ತಿಧಾಮ್ನೇ ನೇತ್ರ ತ್ರಯಾಯ ವೌಷಟ್
ಓಂ ಓಂ ಓಂ ಅನಂತಶಕ್ತಿಧಾಮ್ನೇ ಅಸ್ತ್ರಾಯಫಟ್ । ಭೂರ್ಭುವಃ ಸ್ವರೋ
ಮಿತಿ ದಿಗ್ಬಂಧಃ ।

ಧ್ಯಾಯೇನ್ನಿತ್ಯಂ ಮಹೇಶಂ ರಜತಗಿರಿನಿಭಂ ಚಾರುಚಂದ್ರಾವತಂಸಂ ।
ರತ್ನಾಕಲ್ಪೋಜ್ಜ್ವಲಾಂಗಂ ಪರಶು ಮೃಗವರಾಭೀತಿಹಸ್ತಂ ಪ್ರಸನ್ನಂ ॥
ಪದ್ಮಾಸೀನಂ ಸಮಂತಾತ್ಸ್ತುತ ಮಮರಗಣೈರ್ವ್ಯಾಘ್ರಕೃತ್ತಿಂ ವಸಾನಂ।
ವಿಶ್ವಾದ್ಯಂ ವಿಶ್ವವಂದ್ಯಂ ನಿಖಿಲಭಯಹರಂ ಪಂಚ ವಕ್ತ್ರಂ ತ್ರಿಣೇತ್ರಂ ॥

ಈಪ್ರಕಾರ ಧ್ಯಾನವನ್ನು ಮಾಡಿ ಶಿಷ್ಯನ ಕಡೆಯಿಂದ ಮಾಡಿಸಬೇಕು. ಆ ಮೇಲೆ ಪ್ರಣವಸಹಿತವಾದ * ಪಂಚಾಕ್ಷರೀ ಮಂತ್ರವನ್ನು ಶಿಷ್ಯನ ಕರ್ಣಗಳಲ್ಲಿ ೩ ಸಾರೆ ಗುಪ್ತವಾಗಿ ಉಪದೇಶಿಸಿ ೩ ಸಾರೆ ಶಿಷ್ಯನ ಕಡೆಯಿಂದ ಅನ್ನಿಸಬೇಕು.

## "ಊರ್ಧ್ವಾಂಗುಲಿಪಾಣಿನಿಧಾನಂ"

ಆ ಮೇಲೆ ಆಚಾರ್ಯನು " ಮಮವ್ರತೇ ,, ಇತಿ ಮಂತ್ರಸ್ಯ ಪ್ರಜಾಪತಿ ಋಷಿಃ । ಬೃಹಸ್ಪತಿರ್ದೇವತಾ । ತ್ರಿಷ್ಟುಪ್‌ಛಂದಃ । ವಟೋರ್ಹೃದಯೇ ಊರ್ಧ್ವಾಂಗುಲಿಪಾಣಿನಿಧಾನೇ ವಿನಿಯೋಗಃ ॥

ಮಮ ವ್ರತೇ ಹೃದಯಂ ತೇ ದಧಾಮಿ। ಮಮ ಚಿತ್ತಮನುಚಿತ್ತಂ ತೇ ಅಸ್ತು ಮಮವಾಚಮೇಕವ್ರತೇ ಜುಷಸ್ವ । ಬೃಹಸ್ಪತಿಷ್ಟ್ವಾ ನಿಯುನಕ್ತು ಮಹ್ಯಂ ॥

ಈ ಮಂತ್ರದಿಂದ ತನ್ನ ಹಸ್ತವನ್ನು ಊರ್ಧ್ವಾಂಗುಲಿಗಳುಳ್ಳದ್ದನ್ನಾಗಿ ಮಾಡಿ ಬ್ರಹ್ಮಚಾರಿಯ ಹೃದಯದಲ್ಲಿಡಬೇಕು.

---

* ಪಂಚಾಕ್ಷರೀಮಂತ್ರವು ಪ್ರಸಾದ ಪಂಚಾಕ್ಷರೀ ಮಾಯಾಪಂಚಾಕ್ಷರೀ ಸೂಕ್ಷ್ಮಪಂಚಾಕ್ಷರೀ ಸ್ಥೂಲ ಪಂಚಾಕ್ಷರೀ · ಮೂಲಪಂಚಾಕ್ಷರೀ ಮಂತ್ರಗಳೆಂದು ೫ ಪ್ರಕಾರವಾಗಿರುವದು. ರಂಭಾಪುರೀ ಉಜ್ಜಯಿನೀ ಹಿಮಾಲಯ ಶ್ರೀಶೈಲ ಕಾಶೀಘರ್ಮಪೀಠಗಳ ಶಿಷ್ಯರಿಗೆ ಅನುಕ್ರಮವಾಗಿ ಆ ಮಂತ್ರಗಳ ಋಷಿ ಛಂದಸ್ಸು ದೇವತಾ. ಬೀಜ ಶಕ್ತಿ ಕೀಲಕಾದಿಗಳನ್ನು ತಿಳಿದು ಜಪಿಸಬೇಕು.

## ,, ಮೇಖಲಾಬಂಧನಂ ,,

ಆ ಮೇಲೆ ಆಚಾರ್ಯನು " ಇಯಂದುರುಕ್ತಾದಿತಿ ಮಂತ್ರಸ್ಯ ವಾಮ ದೇವ ಋಷಿಃ ! ತ್ರಿಷ್ಟುಪ್ ಛಂದಃ । ಮೇಖಲಾಬಂಧನೇ ವಿನಿಯೋಗಃ ।

" ಇಯಂ ದುರುಕ್ತಾತ್ಪರಿಬಾಧಮಾನಾ । ಶರ್ಮವರೂಥಂ ಪುವತೀವ ಆಗಾತ್ । ಪ್ರಾಣಾಪಾನಾಭ್ಯಾಂಬಲಮಾಭರಂತೀ । ಪ್ರಿಯಾದೇವಾನಾಂ ಸುಭಗಾಮೇಖಲೇಯಂ ॥ ಋತಸ್ಯಗೋಪ್ತ್ರೀ ತಪಸಃ ಪರಸ್ಪಿಘ್ನತೀರಕ್ಷಃ ಸಹ ಮಾನಾ ಅರಾತೀಃ । ಸಾವಃ ಸಮಂತ ಮನುಪರೇಹಿ ಭದ್ರಯಾ ಭರ್ತಾರ ಸ್ತೇ ಮೇಖಲೇ ಮಾರಿಷಾಮ ॥

ಈ ಮಂತ್ರವನ್ನು ವಟುವಿನ ಕಡೆಯಿಂದ ಅನ್ನಿಸಿ ರಕ್ಷಣಾರ್ಥವಾಗಿಯೂ ಶುದ್ಧ್ಯರ್ಥವಾಗಿಯೂ ದರ್ಭಮೇಖಲೆಯನ್ನು ನಡಕ್ಕೆ ಮೂರುಸಾರೆ ಸುತ್ತಿ ನಾಭಿಸ್ಥಾನದಲ್ಲಿ ಮೂರುಗಂಟುಗಳನ್ನು ಹಾಕಬೇಕು. ಆಗ್ಗೆ ವಟುವು ಅಂಗಸಹಿತ ವೇದತ್ರಯದಿಂದ ಆವೃತನಾದೆನೆಂದು ತಿಳಿಯಬೇಕು.

## ॥ ದಂಡಧಾರಣಂ ॥

ಆ ಮೇಲೆ ಆಚಾರ್ಯನು " ಸ್ವಸ್ತಿನ ಇತಿ ಮಂತ್ರಸ್ಯ ಆತ್ರೇಯಋಷಿಃ ತ್ರಿಷ್ಟುಪ್ ಛಂದಃ । ವಿಶ್ವೇದೇವತಾಃ । ದಂಡದಾನೇ ವಿನಿಯೋಗಃ ॥

" ಓಂ ಸ್ವಸ್ತಿನೋಮಿಮೀತಾಮಶ್ವಿನಾ ಭಗಃ ಸ್ವಸ್ತಿ ದೇವ್ಯದಿತಿರವರ್ಣಃ । ಸ್ವಸ್ತಿಪೂಷಾ ಅಸುರೋದಧಾತುನಃ ಸ್ವಸ್ತಿದ್ಯಾವಾ ಪೃಥಿವೀಸು ಚೇತು ನಾ ॥

ಈ ಮತ್ರದಿಂದ ಧರ್ಮರಕ್ಷಣಕ್ಕಾಗಿಯೂ ಅಧರ್ಮ ನಿವೃತ್ತಿಗಾಗಿಯೂ ಗೋತ್ರಾನುಸಾರವಾಗಿ ಕೇಶಪರಿಮಿತವಾದ ದಂಡವನ್ನು ಶಿಷ್ಯನ ಹಸ್ತದಲ್ಲಿಕೊಡಬೇಕು. ಆ ಮೇಲೆ ಬ್ರಹ್ಮಚಾರಿಯು " ಅದಾಂಶಂ ದಮಯಿತ್ವಾ ಮಾಂ ಮಾರ್ಗೇ ಸಂಸ್ಥಾಪಯನ್ ಸ್ವಯಂ । ದಂಡಃ ಕರೇ ಸ್ಥಿತೋಯಸ್ಮಾತ್ತಸ್ಮಾದ್ರಕ್ಷ ಯತೋಽಭಯಂ ॥ ಈ ಪ್ರಕಾರವಾಗಿ ಅನ್ನಿಸಬೇಕು.

## ॥ ಕಮಂಡಲು ಭಿಕ್ಷಾಪಾತ್ರ ಧಾರಣಂ ॥

" ಅಮೇಲೆ ಆಚಾರ್ಯನು ಆಕಲಶೇಷುಧಾವತಿ ಶ್ಯೇನೋಪರ್ಮವಿದಾಹತೇ । ಅಭಿದ್ರೋಣಾಕನಿಕ್ರದತ್ ॥

ಈ ಮಂತ್ರವನ್ನು ಪಠಿಸಿ ಕಮಂಡಲವನ್ನು ಶಿಷ್ಯನ ಹಸ್ತದಲ್ಲಿ ಕೊಡಬೇಕು. ಆ ಮೇಲೆ ಭಿಕ್ಷಾಪಾತ್ರೆ ಜೋಳಿಗೆಯನ್ನು ಕೊಡಬೇಕು.

## ॥ ಆಚಾರೋಪದೇಶಕ್ರಮಃ ॥

ಎಲೈ ಶಿಷ್ಯನೇ ನೀನು ಬ್ರಹ್ಮಚಾರಿಯು ಇದ್ದಿ, ಮೂತ್ರ ಪುರೀಷಾದಿಗಳಲ್ಲಿ ಶುದ್ಧಿಗಾಗಿ ಆಚಮನವನ್ನು ಮಾಡು, ಶಿವಪೂಜಾದಿ ಕರ್ಮವನ್ನು ಮಾಡು, ಹಗಲು ಮಲಗಬೇಡ, ಆಚಾರ್ಯನ ಅಧೀನನಾಗಿ ವೇದವನ್ನು ಅಭ್ಯಾಸಮಾಡು, ಸತ್ಯವನ್ನು ನುಡಿ, ಧರ್ಮದಂತೆ ನಡೆ, ವೇದಾಧ್ಯಯನದಿಂದ ತಪ್ಪಬೇಡ, ಆಚಾರ್ಯನಿಗೆ ಧನವನ್ನು ಸಮರ್ಪಿಸು, ಪ್ರಜಾತಂತುವನ್ನು ಛೇದಿಸಬೇಡ, ಸತ್ಯವನ್ನು ಬಿಡಬೇಡ, ಧರ್ಮದಿಂದ ಚ್ಯುತನಾಗಬೇಡ, ಕುಶಲದಿಂದ ತಪ್ಪಬೇಡ, ವಿಭೂತಿಗೋಸ್ಕರ ಅಜಾಗ್ರತೆಯನ್ನು ಹೊಂದಬೇಡ, ಈ ಪ್ರಕಾರವಾಗಿ ಧರ್ಮಬೋಧವನ್ನು ಮಾಡಬೇಕು.

## ॥ ಸ್ವಿಷ್ಟಕೃದ್ಧೋಮಃ ॥

ಆ ಮೇಲೆ ಆಚಾರ್ಯನು ಅಗ್ನಿಯ ಸಮೀಪಕ್ಕೆ ಹೋಗಿ ಕುಳಿತುಕೊಂಡು ಸೌಟಿನಲ್ಲಿ ತುಪ್ಪವನ್ನು ತೆಗೆದುಕೊಂಡು " ಯದಸ್ಯೇತಿ ಮಂತ್ರಸ್ಯ ಹಿರಣ್ಯಗರ್ಭಋಷಿಃ । ಧೃತಿಶ್ಛಂದಃ । ಅಗ್ನಿರ್ದೇವತಾ । ಸ್ವಿಷ್ಟಕೃದ್ಧೋಮೇ ವಿನಿಯೋಗಃ

" ಓಂ ಯದಸ್ಯ ಕರ್ಮಣೋ ತ್ಯರೀರಿಚಂ ಯದ್ವಾ ನ್ಯೂನಮಿಹಾಕರಂ । ಅಗ್ನಿಷ್ಟತ್ ಸ್ವಿಷ್ಟಕೃದ್ವಿದ್ವಾನ್ ಸರ್ವಂ ಸ್ವಿಷ್ಟಂ ಸುಹುತಂ ಕರೋತುಮೇ ॥ ಅಗ್ನಯೇಸ್ವಿಷ್ಟಕೃತೇ ಸುಹುತಹುತೇ ಸರ್ವಪ್ರಾಯಶ್ಚಿತ್ತಾಹುತೀನಾಂ ಕಾಮಾನಾಂ ಸಮರ್ಧಯಿತ್ರೇ ಸರ್ವಾನ್ನಃ ಕಾಮಾನ್ ಸಮರ್ಧಯ ॥ ಸ್ವಾಹಾ ॥

ಈ ಮಂತ್ರವನ್ನುಚ್ಚರಿಸಿ ಅಗ್ನಿಯ ಈಶಾನ ಮೂಲೆಯಲ್ಲಿ ಹೋಮವನ್ನು ಮಾಡಬೇಕು" ಸ್ವಿಷ್ಟಕೃತೇ ಅಗ್ನಯೇ ಇದಂ ನ ಮಮ ,, ಎಂದು ತುಪ್ಪವನ್ನು ಬಿಡಬೇಕು. ಆ ಮೇಲೆ ಅಗ್ನಿಯ ಉತ್ತರದಲ್ಲಿದ್ದ ಯಜ್ಞ ಕಟ್ಟಿಗೆಯನ್ನು ಕಟ್ಟಿದ ಹಗ್ಗವನ್ನು ತೆಗೆದುಕೊಂಡು " ಪಶುಪತಯೇ ರುದ್ರಾಯ ಸ್ವಾಹಾ ,, ಎಂದು ಹೋಮವನ್ನು ಮಾಡಿ " ಪಶುಪತಯೇರುದ್ರಾಯೇದಂನಮಮ ,, ಎಂದು ಉಚ್ಚರಿಸಬೇಕು, ಆ ಮೇಲೆ ಹಸ್ತವನ್ನು ತೊಳೆದು ೨ ಸಾರೆ ಪ್ರಾಯಶ್ಚಿತ್ತ ಹೋಮವನ್ನು ಮಾಡಬೇಕು.

## ॥ ಪ್ರಾಯಶ್ಚಿತ್ತಾಜ್ಯಹೋಮಃ ॥

॥ ಮಂತ್ರಗಳು ॥ " ಅಯಾಶ್ಚೇತಿ ಮಂತ್ರಸ್ಯ ವಿಮದಋಷಿಃ । ಪಂಕ್ತಿಶ್ಛಂದಃ । ಯಾಲಗ್ನಿರ್ದೇವತಾ ಪ್ರಾಯಶ್ಚಿತ್ತಾಜ್ಯ ಹೋಮೇ ವಿನಿಯೋಗಃ ॥

ಅಯಾಶ್ಚಾಗ್ನೇಸ್ಯವಭಿಶಸ್ತಿಶ್ಚ ಸತ್ಯಮಿತ್ವಮಯಾಅಸಿ । ಅಯಾಸಾ ವಯಸಾ ಕೃತೋಯಾಸನ್ ಹವ್ಯಮೂಹಿಷೇವ್ಯಾನೋಧೇಹಿ ಭೇಷಜಂ ಸ್ವಾಹಾ

ಈ ಮಂತ್ರದಿಂದ ತುಪ್ಪವನ್ನು ಹೋಮಮಾಡಬೇಕು. " ಅಯಾಸೇ ಅಗ್ನಯೇ ಇದಂ ನ ಮಮ ,, ಎಂದು ಉಚ್ಚರಿಸಬೇಕು.

" ಅತೋದೇವಾ ಇತಿ ಮಂತ್ರಸ್ಯ ಮೇಧಾತಿಥಿಃ ಋಷಿಃ । ಗಾಯತ್ರೀಛಂದಃ ದೇವಾದೇವತಾಃ । ಪ್ರಾಯಶ್ಚಿತ್ತಾಜ್ಯಹೋಮೇ ವಿನಿಯೋಗಃ ॥

" ಅತೋದೇವಾ ಅವಂತುನೋ ಯತೋ ವಿಷ್ಣುರ್ವಿಚಕ್ರಮೇ । ಪೃಥಿವ್ಯಾಃ ಸಪ್ತಧಾಮಭಿಃ ॥ ಸ್ವಾಹಾ ॥ ದೇವೇಭ್ಯ ಇದಂ ನ ಮಮ "

ಎಂದು ತುಪ್ಪವನ್ನು ಹೋಮಮಾಡಬೇಕು.

ಇದಂ ವಿಷ್ಣುರಿತಿ ಮಂತ್ರಸ್ಯ ಮೇಧಾತಿಥಿಃ ಋಷಿಃ ! ಗಾಯತ್ರೀಛಂದಃ । ವಿಷ್ಣುರ್ದೇವತಾ ಪ್ರಾಯಶ್ಚಿತ್ತಾಜ್ಯ ಹೋಮೇ ವಿನಿಯೋಗಃ ॥

" ಇದಂ ವಿಷ್ಣುರ್ವಿಚಕ್ರಮೇ ತ್ರೇಧಾನಿದಧೇಪದಂ । ಸಮೂಢಮಸ್ಯ ಪಾಂಸುರೇ ॥ ಸ್ವಾಹಾ ॥ ವಿಷ್ಣವ ಇದಂ ನ ಮಮ "

ಎಂದು ತುಪ್ಪವನ್ನು ಹೋಮಮಾಡಬೇಕು.

ವ್ಯಸ್ತ ಸಮಸ್ತ ವ್ಯಾಹೃತೀನಾಂ ವಿಶ್ವಾಮಿತ್ರ ಜಮದಗ್ನಿ ಭರದ್ವಾಜಪ್ರಜಾಪತಯ ಋಷಯಃ । ಗಾಯತ್ರ್ಯುಷ್ಣಿಗನುಷ್ಟುಬ್ಬೃಹತ್ಯಶ್ಛಂದಾಂಸಿ । ಅಗ್ನಿವಾಯುಸೂರ್ಯ ಪ್ರಜಾಪತಯೋ ದೇವತಾಃ । ಪ್ರಾಯಶ್ಚಿತ್ತಾಜ್ಯ ಹೋಮೇ ವಿನಿಯೋಗಃ ॥ "ಓಂ ಭೂಃ ಸ್ವಾಹಾ " ಅಗ್ನಯ ಇದಂ ನ ಮಮ ॥ " ಓಂ ಭುವಃ ಸ್ವಾಹಾ " ವಾಯುವ ಇದಂ ನ ಮಮ ॥ " ಓಂ ಸ್ವಃ ಸ್ವಾಹಾ " ಸೂರ್ಯಾಯೇದಂ ನ ಮಮ ॥ " ಓಂ ಭೂರ್ಭುವಃ ಸ್ವಃ ಸ್ವಾಹಾ " ಪ್ರಜಾಪತಯ ಇದಂ ನ ಮಮ ॥ ಎಂದು ನಾಲ್ಕು ದೇವತೆಗಳಿಗೆ ನಾಲ್ಕು ಸಾರೆ ತುಪ್ಪವನ್ನು ಹೋಮಮಾಡಬೇಕು.

ಆ ವೇಳೆ ಬ್ರಹ್ಮನು ಯಜಮಾನನನ್ನು ಸುತ್ತರಿದು ಅಗ್ನಿಯವೇದಿಕೆಯ ವಾಯವ್ಯ ದಿಕ್ಕಿನಲ್ಲಿ ನಿಂತು ಮೇಲೆ ಹೇಳಿದಂತೆ " ಅಯಾಶ್ಚಾಗ್ನೇಸ್ಯ ,, ಇತ್ಯಾದಿ ಮಂತ್ರಗಳಿಂದ ೭ ಸಾರೆ ಆಜ್ಯಾಹುತಿಗಳನ್ನು ಹೋಮ ಮಾಡಬೇಕು. ಆಜ್ಯತ್ಯಾಗವನ್ನು ಯಜಮಾನನೇ ಮಾಡಬೇಕು. ಆ ವೇಳೆ ಬ್ರಹ್ಮನು ಅಲ್ಲಿಯೇ ನಿಂತು ಮಂತ್ರ ವಿಪರ್ಯಾಸಾದಿ ನಿಮಿತ್ತಕ ಪ್ರಾಯಶ್ಚಿತ್ತ ಹೋಮವನ್ನು ಮಾಡಬೇಕು.

ಯತ್ವೋದೇವಾ ಇತಿಮಂತ್ರಸ್ಯ ಅಭಿತಪಾಋಷಿಃ । ತ್ರಿಷ್ಟುಪ್ ಛಂದಃ । ಮರುತೋದೇವತಾಃ । ಮಂತ್ರ ವಿಪರ್ಯಾಸಾದಿನಿಮಿತ್ತಕ ಪ್ರಾಯಶ್ಚಿತ್ತಾಜ್ಯ ಹೋಮೇ ವಿನಿಯೋಗಃ ॥

" ಓಂ ಯದ್ವೋದೇವಾ ಆತಿಪಾತಯೋನಿವಾಚಾಚ ಪ್ರಯುತೀದೇವ ಹೇಳನಂ । ಅರಾಯೋ ಅಸ್ಮಾಗ್ಂ ಅಭಿದುಚ್ಛುನಾಯತೇವ್ಯತ್ರಾಸ್ಮಿನ್ ಮರುತಸ್ತನ್ನಿದೇತನ ॥ ಸ್ವಾಹಾ ॥

ಎಂದು ಬ್ರಹ್ಮನು ಪಠಿಸಬೇಕು. ಯಜಮಾನನು " ಮರುಥ್ಭ್ಯ ಇದಂ ನ ಮಮ " ಎಂದು ತುಪ್ಪವನ್ನು ಹೋಮಮಾಡಬೇಕು.

" ಅನಾಜ್ಞಾತಂ ಪುರುಷ ಸಮ್ಮಿತ ಇತಿ ಮಂತ್ರದ್ವಯಸ್ಯ ಹಿರಣ್ಯ ಗರ್ಭ ಋಷಿಃ । ಅನುಷ್ಟುಪ್ ಛಂದಃ ! ಅಗ್ನಿರ್ದೇವತಾ । ಜ್ಞಾತಾ ಜ್ಞಾತ ಕೃತದೋಷ ಪರಿಹಾರಾರ್ಥಮಾಜ್ಯ ಹೋಮೇ ವಿನಿಯೋಗಃ ॥

" ಅನಾಜ್ಞಾತಂ ಯದಾಜ್ಞಾತಂ ಯಜ್ಞಸ್ಯ ಕ್ರಿಯತೇಮಿಥು । ಅಗ್ನೇ ತದಸ್ಯಕಲ್ಪಯ ತ್ವಂ ಹಿವೇತ್ಥ ಯಥಾಯಥಂ ॥ ಸ್ವಾಹಾ ॥ ಪುರುಷ ಸಂಮಿತೋಯಜ್ಞೋ ಯಜ್ಞಃ ಪುರುಷಸಂಮಿತಃ । ಅಗ್ನೇತದಸ್ಯಕಲ್ಪಯತ್ವಂ ಹಿವೇತ್ಥಯಥಾಯಥಂ ॥ ಸ್ವಾಹಾ ॥

ಎಂದು ಬ್ರಹ್ಮನು ಪಠಿಸಬೇಕು. ಯಜಮಾನನು " ಅಗ್ನಯ ಇದಂ ನ ಮಮ. ,, ಎಂಬ ವಾಕ್ಯವನ್ನು ೨ ಸಾರೆ ಉಚ್ಚರಿಸಿ ೨ ಸಾರೆ ತುಪ್ಪವನ್ನು ಹೋಮ ಮಾಡಬೇಕು. " ಯತ್ಪಾಕತ್ರೇತಿ ಮಂತ್ರಸ್ಯ ತ್ರಿತಋಷಿಃ । ತ್ರಿಷ್ಟುಪ್ ಛಂದಃ ಅಗ್ನಿರ್ದೇವತಾ । ನ್ಯೂನಾತಿರಿಕ್ತ ಪರಿಪೂರ್ಣಾರ್ಥಾಜ್ಯ ಹೋಮೇ ವಿನಿಯೋಗಃ ॥

" ಯತ್ಪಾಕತ್ರಾ ಮನಸಾ ದೀನದಕ್ಷಾ ನಯಜ್ಞಸ್ಯ ಮನ್ವತೇ ಮರ್ತ್ಯಾಸಃ । ಅಗ್ನಿಷ್ಟದ್ಧೋತಾ ಕ್ರತುವಿದ್ವಿಜಾನನ್ಯ ಜಿಷ್ಠೋ ದೇವಾಗ್ಂ ಕ್ರತುಶೋ ಯಜಾತಿ ಸ್ವಾಹಾ

ಎಂದು ಬ್ರಹ್ಮನು ಪಠಿಸಬೇಕು. ಯಜಮಾನನು " ಅಗ್ನಯ ಇದಂ ನ ಮಮ ,, ಎಂದು ತುಪ್ಪವನ್ನು ಹೋಮ ಮಾಡಬೇಕು. ಆ ಮೇಲೆ ಬ್ರಹ್ಮನು ಅಕ್ಕಿಯ ನುಚ್ಚುಗಳನ್ನು ಯಜ್ಞಕಟ್ಟಿಗೆಯ ತುಂಡುಗಳನ್ನು ದರ್ಭಗಳನ್ನು ಜಲದಿಂದ ಪ್ರೋಕ್ಷಿಸಿ ಅಗ್ನಿಯಲ್ಲಿ ಹಾಕಬೇಕು.

## ॥ ಮಾರ್ಜನವಿಧಿಃ ॥

ಅನಂತರ ಯಜಮಾನನು ಪರಿಶುದ್ಧವಾದ ಒಂದು ದೊಡ್ಡ ಪಾತ್ರೆಯನ್ನು ಶುದ್ಧ ಜಲದಿಂದ ತುಂಬಿ ಅದನ್ನು ದರ್ಭಾಸನದ ಮೇಲಿಟ್ಟು ಬಲಹಸ್ತದಿಂದ ಮುಟ್ಟಿ ಗಂಗಾದಿ ಪುಣ್ಯನದಿಗಳನ್ನು ಸ್ಮರಿಸಿ

ಪೂರ್ಣಮಸಿ ಪೂರ್ಣಂ ಮೇ ಭೂಯಾಃ । ಸುಪೂರ್ಣಮಸಿ ಸುಪೂರ್ಣಂ ಮೇ ಭೂಯಾಃ । ಸದಸಿ ಸನ್ಮೇ ಭೂಯಾಃ । ಸರ್ವಮಸಿ ಸರ್ವಂ ಮೇ ಭೂಯಾಃ । ಅಕ್ಷಿತಿಂಸಿ ಮಾವೇ ಕ್ಷೇಷ್ಠಾ ॥

ಈ ಮಂತ್ರವನ್ನು ಪಠಿಸಿ ದರ್ಭಾಗ್ರಗಳಿಂದ ಆ ಪಾತ್ರೆಯ ಪೂರ್ವಾದಿ ಪಂಚ ದಿಕ್ಕುಗಳಲ್ಲಿ ಮುಂದೆ ಹೇಳುವ ಮಂತ್ರಗಳಿಂದ ಪ್ರೋಕ್ಷಿಸಬೇಕು. ಪೂರ್ವ ದಿಕ್ಕಿನಲ್ಲಿ " ದೇವಾಯತ್ವಿಜೋಮಾರ್ಜಯಂತಾಂ " ದಕ್ಷಿಣದಿಕ್ಕಿನಲ್ಲಿ " ಮಾಸಾಃ ಪಿತರೋಮಾರ್ಜಯಂತಾಂ ,, ಪಶ್ಚಿಮದಿಕ್ಕಿನಲ್ಲಿ " ಗೃಹಾಃ ಪಶವೋಮಾರ್ಜಯಂತಾಂ ,, ಉತ್ತರದಿಕ್ಕಿನಲ್ಲಿ " ಅಪ ಓಷಧಯೋವನಸ್ಪತಯೋ ಮಾರ್ಜಯಂತಾಂ ,, ಮಧ್ಯದಿಕ್ಕಿನಲ್ಲಿ" ಯಜ್ಞಃ ಸಂವತ್ಸರಃ ಪ್ರಜಾಪತಿರ್ಮಾರ್ಜಯಂತಾಂ ,, ಈ ಮಂತ್ರಗಳಿಂದ ಪ್ರೋಕ್ಷಿಸಬೇಕು.

ಆ ಮೇಲೆ ಯಜಮಾನನು ತನ್ನ ಎಡಭಾಗದಲ್ಲಿದ್ದ ಹೆಂಡತಿಯೊಡನೆ ದರ್ಭಾಗ್ರಗಳಿಂದ ಈ ಮುಂದೆ ಹೇಳುವ ಮಂತ್ರಗಳನ್ನು ಪಠಿಸುತ್ತ ತನ್ನ ತಲೆಯ ಮೇಲೆ ಮಾರ್ಜನ ಮಾಡಿಕೊಳ್ಳಬೇಕು. " ಅಪೋ ಅಸ್ಮಾನಿತಿ ಮಂತ್ರಸ್ಯ ದೇವಶ್ರವಾ ಋಷಿಃ । ತ್ರಿಷ್ಟುಪ್ ಛಂದಃ ಅಪೋದೇವತಾ । ಮಾರ್ಜನೇ ವಿನಿಯೋಗಃ ॥

" ಓಂ ಅಪೋ ಅಸ್ಮಾನ್ಮಾತರಃ ಶುಂಧಯಂತು ಘೃತೇನ ನೋ ಘೃತಪ್ವಃ ಪುನಂತು । ವಿಶ್ವಂ ಹಿರಿಪ್ರಂ ಪ್ರವಹಂತಿ ದೇವೀರುದಿದಾಭ್ಯಃ ಶುಚಿರಾ ಪೂತಯೇಮಿ ॥

" ಓಂ " ಇದಮಾಪ ಇತಿ ಮಂತ್ರಸ್ಯ ಸಿಂಧುದ್ವೀಪ ಋಷಿಃ । ಅನುಷ್ಟುಪ್ ಛಂದಃ । ಅಪೋದೇವತಾ । ಮಾರ್ಜನೇ ವಿನಿಯೋಗಃ ॥ .

ಇದಮಾಪಃ ಪ್ರವಹತ ಯತ್ಕಿಂಚಿದ್ದುರಿತಂಮಯಿ । ಯದ್ವಾಹಮಭಿದುದ್ರೋಹ ಯದ್ವಾ ಶೇಪ ಉತಾನೃತಂ ॥ ಈ ಮಂತ್ರಗಳಿಂದ ಮಾರ್ಜನವನ್ನು ಮಾಡಿ ಸುಮಿತ್ರ್ಯಾನ ಆಪಓಷಧಯಃ ಸಂತು ದುರ್ಮಿತ್ರಾಸ್ತಸ್ಮೈ ಸಂತು । ಯೋಸ್ಮಾನ್ ದ್ವೇಷ್ಟಿ ಯಂ ಚ ವಯಂ ದ್ವಿಷ್ಮಃ ತಂ ಹನ್ಮಿ ॥

ಈ ಮಂತ್ರದಿಂದ ನೈಋತ್ಯದಿಕ್ಕಿನಲ್ಲಿ ದರ್ಭಾಗ್ರಗಳಿಂದ ಜಲವನ್ನು ಪ್ರೋಕ್ಷಿಸಬೇಕು.

ಆ ಮೇಲೆ ಯಜಮಾನನ್ನು ತನ್ನ ಹೆಂಡತಿಯ ಬೊಗಸೆಯಲ್ಲಿ ತುಂಬಿದ ಪಾತ್ರೆಯಲ್ಲಿದ್ದ ನೀರನ್ನು

" ಮಾಹು ಪ್ರಜಾಂ ಪರಾಸಿಂಚ । ಯಾವಃ ಸಯಾವರೀಸ್ತನಾ ಸಮುದ್ರೇವೋ ನಿವಯಾವಿವಃ । ಸ್ವ ಪಾಥೋ ಅಪೀಥ ॥

ಈ ಮಂತ್ರವನ್ನು ಪಠಿಸುತ್ತ ಅಥವಾ ಹೆಂಡತಿಯಿಂದ ಅನ್ನಿಸುತ್ತ ಸೌಟಿನಿಂದ ಎರೆಯಬೇಕು. ಆ ಮೇಲೆ ಬ್ರಹ್ಮನು ಆ ಸ್ತ್ರೀಯಳ ಬೊಗಸೆಯಲ್ಲಿದ್ದ ಜಲವನ್ನು ದರ್ಭಾಗ್ರಗಳಿಂದ ಪಾಪನಾಶಕ್ಕಾಗಿ ಯಜಮಾನನಿಗೂ ಅವನ ಪತ್ನಿಗೂ ಪ್ರೋಕ್ಷಿಸಬೇಕು. ಉಳಿದ ಜಲವನ್ನು ದರ್ಭೆಯ ಮೇಲೆ ಪ್ರೋಕ್ಷಿಸಬೇಕು.

ಅನಂತರ ಯಜಮಾನನು ಅಗ್ನಿಯ ವಾಯುವ್ಯದಿಕ್ಕಿನಲ್ಲಿ ನಿಂತು ಮುಂದೆ ಹೇಳುವ ಮಂತ್ರಗಳಿಂದ ಅಗ್ನಿಯನ್ನು ಸ್ತುತಿಸಬೇಕು.

ಅಗ್ನೇ ತ್ವಂ ನ ಇತಿ ಚತುರ್ಣಾಂ ಮಂತ್ರಾಣಾಂ ಬಂಧು ಸುಬಂಧು, ಶ್ರುತಬಂಧು ವಿಪ್ರಬಂಧವ ಋಷಯಃ । ದ್ವಿಪದಾವಿರಾಟ್ ಛಂದಸೀ । ಅಗ್ನಿರ್ದೇವತಾ । ಅಗ್ನ್ಯುಪಸ್ಥಾನೇ ವಿನಿಯೋಗಃ ॥

" ಅಗ್ನೇತ್ವಂನೋ ಅಂತಮಃ । ಉತತ್ರಾತಾಶಿವೋ ಭವ ವರೂಥ್ಯಃ ವಸುರಗ್ನಿರ್ವಸುಶ್ರವಾ ಅಚ್ಛಾನಕ್ಷಿ ದ್ಯುಮತ್ತಮಂ ರಯಿಂದಾಃ ॥ ಸನೋಬೋಧಿಸುಧೀಹವ ಮುರುಷ್ಯಾಣೋ ಅಘಾಯತಃ ಸಮಸ್ಮಾತ್ । ತಂತ್ವಾಶುಚಿಷ್ಠದೀದಿವಃ ಸುಮ್ನಾಯುವನೂನಮೀಮಹೇ ಸಖಿಭ್ಯಃ ॥ ಓ ಚಮೇಸ್ವರಶ್ಚ ಮೇ ಯಜ್ಞೋಪಚತೇನಮಶ್ಚ । ಯತ್ತೇನ್ಯೂನಂ ತಸ್ಮೈ ತೇ ಉಪಯತೇಽತಿರಿಕ್ತಂ ತಸ್ಮೈತೇನಮಃ ॥ ಸ್ವಸ್ತಿ ಶ್ರದ್ಧಾಂ ಮೇಧಾಂ ಯಶಃ ಪ್ರಜ್ಞಾಂ ವಿದ್ಯಾಂ ಬುದ್ಧಿಂ ಶ್ರಿಯಂ ಬಲಂ । ಆಯುಷ್ಯಂ ತೇಜ ಆರೋಗ್ಯಂ ದೇಹಿ ಮೇ ಹವ್ಯವಾಹವ ॥

ಆ ಮೇಲೆ ಬ್ರಹ್ಮನು ವಾಯುವ್ಯ ದಿಕ್ಕಿನಲ್ಲಿ ನಿಂತು ಇವೇ ಮಂತ್ರಗಳಿಂದ ಸ್ತುತಿಸಬೇಕು.

ಅನಂತರ ಯಜಮಾನನು ಅಗ್ನಿಯನ್ನು ಗುಂಪಿ ಮಾಡಿ ಜಲವನ್ನು ಪ್ರೋಕ್ಷಿಸಿ.

" ವಿಶ್ವಾನಿನೋ ದುರ್ಗಹಾಜಾತವೇದಃ । ಸಿಂಧುಂವನಾವಾದುರಿತಾತಿಪರ್ಷಿ । ಅಗ್ನೇ ಅತ್ರಿವನ್ನ ಮಸಾಗೃಣಾನಃ । ಅಸ್ಮಾಕಂ ಬೋಧ್ಯವಿತಾತನೂನಾಂ । ಯಸ್ತ್ವಾ ಹೃದಾ ಕೀರಿಣಾಮನ್ಯಮಾನಃ । ಅಮರ್ತ್ಯಂಮರ್ತ್ಯೋ ಜೋಹವೀಮಿ ॥ ಜಾತವೇದೋ ಯಶೋ ಅಸ್ಮಾಸು ಧೇಹಿ ॥ ಪ್ರಜಾಭಿರಗ್ನೇ ಅಮೃತತ್ವಮಸ್ಯಾಂ ॥

ಈ ಮಂತ್ರದಿಂದ ಅಗ್ನಿಯನ್ನು ಪೂಜಿಸಿ ನಮಸ್ಕರಿಸಿ ಪುಷ್ಪಾದಿಗಳಿಂದ ಲಂಕರಿ ನೈವೇದ್ಯ ತಾಂಬೂಲಗಳನ್ನು ಸಮರ್ಪಿಸಬೇಕು. ಆ ಮೇಲೆ ಬ್ರಹ್ಮನಿಗೆ

ದಕ್ಷಿಣೆಯನ್ನು ಕೊಡಬೇಕು. ಅನಂತರ ಯಜ್ಞದ ಪಾತ್ರೆಗಳನ್ನು ತೊಳೆದು ಮೊದ
ಲಿನಂತೆ ಕ್ರಮವಾಗಿ ಎರಡೆರಡು ಎತ್ತಿ ತೆಗೆಯಬೇಕು.

## ॥ ಅಗ್ನ್ಯುತ್ಸರ್ಜನಂ ॥

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ಜಪಹೋಮಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ಸದಾಶಿವಂ ॥
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಸುರೇಶ್ವರ ।
ಯದ್ಹುತಂ ತು ಮಯಾದೇವ ಪರಿಪೂರ್ಣಂ ತದಸ್ತು ಮೇ ॥

ಅನೇನ ಶಿವದೀಕ್ಷಾಹೋಮೇನ ಭಗವಾನ್ ಸರ್ವಾತ್ಮಕೋ ಯಜ್ಞರೂಪಿ ಶ್ರೀ ಪರ
ಮೇಶ್ವರಃ ಪ್ರೀಯತಾಂ ॥ ೧೦ ॥ ಗಚ್ಛ ಗಚ್ಛ ಸುರಶ್ರೇಷ್ಠ ಸ್ವಸ್ಥಾನಂ ಪರಮೇ
ಶ್ವರ । ಯತ್ರ ಬ್ರಹ್ಮಾದಯೋ ದೇವಾಸ್ತತ್ರ ಗಚ್ಛ ಹುತಾಶನ ॥ ಯಜ್ಞೇಶ್ವರಾಯ
ನಮಃ । ಯಥಾಸ್ಥಾನಂ ಪ್ರತಿಷ್ಠಾಪಯಾಮಿ ॥ ಎಂದು ಯಜಮಾನನು ಅಗ್ನಿ
ಯನ್ನು ವಿಸರ್ಜಿಸಬೇಕು.

## ॥ ಪಂಚಬ್ರಹ್ಮಕಲಶೋತ್ಸರ್ಜನಂ ॥

ಆ ಮೇಲೆ ಆಚಾರ್ಯನು ಹಾಗೂ ನಾಲ್ವರು ಋತ್ವಿಜರು ತಮ್ಮ ತಮ್ಮ
ಕಲಶಗಳನ್ನು ಮುಟ್ಟಿ ಸದ್ಯೋಜಾತಾದಿ ಮಂತ್ರಗಳನ್ನು ಪಠಿಸುತ್ತ " ಸದ್ಯೋ
ಜಾತ ಬ್ರಹ್ಮಣೇ ನಮಃ ವಾಮದೇವ ಬ್ರಹ್ಮಣೇ ನಮಃ ಅಘೋರ ಬ್ರಹ್ಮಣೇ ನಮಃ
ತತ್ಪುರುಷ ಬ್ರಹ್ಮಣೇ ನಮಃ ಈಶಾನಬ್ರಹ್ಮಣೇ ನಮಃ ಯಥಾಸ್ಥಾನಂ ಪ್ರತಿಷ್ಠಾಪ
ಯಾಮಿ " ಎಂದು ವಿಸರ್ಜಿಸಬೇಕು. ಆ ಮೇಲೆ ಸರ್ವರು ತಮ್ಮ ತಮ್ಮ ಸೂತ್ರ
ಕಂಕಣವನ್ನು ಮುಂಗೈಯಲ್ಲಿ ಧರಿಸಿಕೊಳ್ಳಬೇಕು.

## " ಭಿಕ್ಷಾಟನವಿಧಿಃ "

ಅನಂತರ ಬ್ರಹ್ಮಚಾರಿಯು ಭಿಕ್ಷಾಪಾತ್ರೆಯನ್ನು ತೆಗೆದುಕೊಂಡು ದಂಡ ಮೊದ
ಲಾದವುಗಳನ್ನು ಧರಿಸಿಕೊಂಡು ಭವತಿ ಭಿಕ್ಷಾಂ ದೇಹಿ ಎಂದು ಹೊದಲು ತಾ

ಯಿಯನ್ನು ಹಾಗೂ ತನ್ನ ಸಂಬಂಧಿಕರಾದ ಜನರನ್ನು ಆ ಹೋಲಿ ಉಳಿದ ಜನರನ್ನು ಯಥೋಚಿಸಿ ಅದನ್ನು ಗುರುವಿಗೆ ಸಮರ್ಪಿಸಬೇಕು. ಆ ಮೇಲೆ ಸಮಸ್ತ ಮಾಹೇಶ್ವರರು.

“ ಶ್ರೀಶಿವಭಕ್ತಾಯ ಗುರುಭಕ್ತಿಯುಕ್ತಾಯ ಮುಕ್ತಿ ಮಾರ್ಗಾಸಕ್ತಚಿತ್ತಾಯ ಶಕ್ತಿವಿಶಿಷ್ಟಾದ್ವೈತವಾದಿನೇ ತುಭ್ಯಂ ಶ್ರೀಜಗದ್ಗುರು ರೇವಣಾರಾಧ್ಯ ಮರುಳಾರಾಧ್ಯೈಕೋರಾಮಾರಾಧ್ಯ ಪಂಡಿತಾರಾಧ್ಯ ವಿಶ್ವಾರಾಧ್ಯ ವಿಶ್ವಾತ್ಮನೋ ವಿಶ್ವವೈಭವಂ ವಿಶ್ವವಿದ್ಯಾ ವಿಶ್ವಸಿದ್ಧಿಲಕ್ಷ್ಮೀ ವಿತನ್ವಂತು ವಿಶ್ವಪಾಲಾಃ ॥

ಈ ಮಂತ್ರದಿಂದ ಬ್ರಹ್ಮಚಾರಿಯನ್ನು ಆಶೀರ್ವದಿಸಬೇಕು. ಆ ಮೇಲೆ ಮುತ್ತೈದೆಯರು ಆರತಿಯನ್ನು ಬೆಳಗಬೇಕು. ಅನಂತರ ಬ್ರಹ್ಮಚಾರಿಯು ಗುರುಪೂಜೆಯನ್ನು ಮಾಡಿ ಸಕಲ ಮಾಹೇಶ್ವರರನ್ನು ಭೋಜನ ತಾಂಬೂಲ ದಕ್ಷಿಣಾದಿಗಳಿಂದ ತೃಪ್ತಿಗೊಳಿಸಬೇಕು.

ಈ ಪ್ರಕಾರವಾಗಿ ಬ್ರಹ್ಮಚಾರಿಯು ಶಿವದೀಕ್ಷಾಬದ್ಧನಾದಮೇಲೆ ಗುರುಕುಲದಲ್ಲಿದ್ದು ತನ್ನ ಗೋತ್ರಾನುಸಾರವಾಗಿ ವೇದಾಧ್ಯಯನವನ್ನು ಮಾಡಬೇಕು.

ಅಧೀತ್ಯ ಶಾಖಾಮಾತ್ಮೀಯಾಮನ್ಯಶಾಖಾಂ ತತಃ ಪಠೇತ್ ।
ಸ್ವಶಾಖಾಂ ಯಃ ಪರಿತ್ಯಜ್ಯ ಶಾಖಾರಂಡಃ ಸ ಉಚ್ಯತೇ ॥

ಈ ವಿಧಿವಾಕ್ಯದಂತೆ ಆದಿಯಲ್ಲಿ ತನ್ನ ವೇದವನ್ನು ಬಿಟ್ಟು ಅನ್ಯವೇದಗಳನ್ನು ಅಧ್ಯಯನಮಾಡಬಾರದು. ತನ್ನ ವೇದಾಧ್ಯಯನವಾದಮೇಲೆ ಉಳಿದ ವೇದಗಳನ್ನು ಪಠಿಸಬೇಕು.

॥ ಶ್ರೀ ಸಾಂಬ ಸದಾಶಿವಾರ್ಪಣಮಸ್ತು ॥

ನಾಗನೂರು ಬ್ರಹ್ಮಮಠಾಧ್ಯಕ್ಷ ಪಂಡಿತ ಶ್ರೀ ಕಾಶೀನಾಥಶಾಸ್ತ್ರಿಣಾ ವಿರಚಿತಾ



